# ಬಸ್ರೂರಿನ ದೇವದಾಸಿ ಪದ್ಧತಿ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪ್ರೌಢ ಪ್ರಬಂಧ

ಸಂಶೋಧಕ
ಪುತ್ತಿ ವಸಂತ ಕುಮಾರ್

ಮಾರ್ಗದರ್ಶಕ
ಡಾ. ಸ.ಚಿ.ರಮೇಶ್



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೨

# ಬಸ್ರೂರಿನ ದೇವದಾಸಿ ಪದ್ಧತಿ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪ್ರೌಢ ಪ್ರಬಂಧ


ಸಂಶೋಧಕ
ಪುತ್ತಿ ವಸಂತ ಕುಮಾರ್

ಮಾರ್ಗದರ್ಶಕ
ಡಾ. ಸ.ಚಿ.ರಮೇಶ್








ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೩

# ಬಸ್ರೂರಿನ ದೇವದಾಸಿ ಪದ್ಧತಿ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪ್ರೌಢ ಪ್ರಬಂಧ


ಸಂಶೋಧಕ

**ಪುತ್ತಿ ವಸಂತ ಕುಮಾರ್**

ಮಾರ್ಗದರ್ಶಕ

**ಡಾ. ಸ.ಚಿ.ರಮೇಶ್**












ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೨

# ದೃಢೀಕರಣ ಪತ್ರ

ಶ್ರೀ ಪುತ್ತಿ ವಸಂತ ಕುಮಾರ್ ಇವರು 'ಬಸ್ರೂರಿನ ದೇವದಾಸಿ ಪದ್ಧತಿ' ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ.

ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಸ್ತುತ ಪ್ರಬಂಧವನ್ನು ಅಥವಾ ಪ್ರಬಂಧದ ಯಾವುದೇ ಭಾಗವನ್ನು ಇವರು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ : ೩೦.೦೪.೨೦೦೨

ಸ್ಥಳ : ವಿದ್ಯಾರಣ್ಯ

(ಡಾ. ಸ.ಚಿ. ರಮೇಶ್)

ಮಾರ್ಗದರ್ಶಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

# ಪ್ರಮಾಣ ಪತ್ರ

'ಬಸ್ರೂರಿನ ದೇವದಾಸಿ ಪದ್ಧತಿ' ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ಸ.ಚಿ.ರಮೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಇತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : ೩೦.೦೪.೨೦೦೨
ಸ್ಥಳ : ವಿದ್ಯಾರಣ್ಯ

(ಪುತ್ತಿ ವಸಂತ ಕುಮಾರ್)
ಎಂ.ಫಿಲ್ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಅಧ್ಯಯನ ಕೈಗೊಳ್ಳಲು ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ. ಎಚ್.ಜೆ.ಲಕ್ಕಪ್ಪಗೌಡ ಮತ್ತು ಕುಲಸಚಿವರಾದ ಡಾ. ಕೆ.ವಿ.ನಾರಾಯಣ ಅವರಿಗೆ,

ಸಹನೆಯಿಂದ ಮಾರ್ಗದರ್ಶನ ಮಾಡಿದ ಪ್ರೀತಿಯ ಗುರುಗಳಾದ ಡಾ. ಸ.ಚಿ.ರಮೇಶ್ ಅವರಿಗೆ,

ಜಾನಪದ ವಿಭಾಗದ ಮುಖ್ಯಸ್ಥರಾದ ಡಾ. ಮಂಜುನಾಥ ಬೇವಿನಕಟ್ಟಿ ಅವರಿಗೆ,

ಅಧ್ಯಯನದ ಸಂದರ್ಭದಲ್ಲಿ ಸಹಕಾರ ನೀಡಿದ ವಿಭಾಗದ ಡಾ. ಹೆಚ್.ಕೆ.ನಾಗೇಶ್, ಶ್ರೀ ಹರಿಶ್ಚಂದ್ರ ಸಾಯಿಬಣ್ಣ ದಿಂಗ್ಸಂಗೀಕರ್ ಮತ್ತು ಶ್ರೀ ಸಿ.ಟಿ. ಗುರುಪ್ರಸಾದ್ ಅವರಿಗೆ,

ವಿಷಯಕ್ಕೆ ಸಂಬಂಧಿಸಿದಂತೆ ತಮ್ಮ ಒತ್ತಡಗಳ ಮಧ್ಯೆಯೂ ನನ್ನೊಂದಿಗೆ ಚರ್ಚಿಸಿ ಸಹಕರಿಸಿದ ಪ್ರೊ. ಎ.ವಿ.ನಾವಡ, ಡಾ. ಸುಬ್ಬಣ್ಣ ರೈ, ಡಾ. ಮಾಧವ ಪೆರಾಜೆ ಮತ್ತು ಡಾ. ಬಿ.ಎಂ.ಪುಟ್ಟಯ್ಯ ಅವರಿಗೆ,

ಅಧ್ಯಯನಕ್ಕೆ ನೆರವಾದ ಗ್ರಂಥಾಲಯದ ಎಲ್ಲ ಸಿಬ್ಬಂದಿ ವರ್ಗಕ್ಕೆ, ಜಾನಪದ ವಿಭಾಗದ ವೀರೇಶ, ತಿಂದಪ್ಪ ಇವರಿಗೆ, ಸಹಕರಿಸಿದ ವಿಶ್ವವಿದ್ಯಾಲಯದ ಎಲ್ಲ ಸಿಬ್ಬಂದಿ ವರ್ಗದವರಿಗೆ ಮತ್ತು ಸ್ನೇಹಿತರಾದ ಮಾರುತಿ ವಿ.ಸಿ, ರಾಜ್‌ಕುಮಾರ್, ವೆಂಕನಗೌಡ, ಕೆ. ಮಹೇಶ್, ಮೋಹನ್, ನಾಗವರ್ಮ, ಜಿ.ಎಚ್. ಲೋಕರಾಜು, ಸುರೇಶ್, ಪ್ರಕಾಶ್ ಹುಗ್ಗಿ, ಸುಭಾಷ್ ದೊಡ್ಡಮನಿ, ಮುನಿರಾಜ್, ಓಂಪ್ರಕಾಶ್, ರಮೇಶ್, ಸೋಮೇಶ್ ಉಪ್ಪಾರ, ಉಮಾಪತಿ, ಮಹೇಶ್, ವೇಣು, ಪ್ರಕಾಶ್ ಮತ್ತು ಇತರ ಎಲ್ಲ ಸ್ನೇಹಿತರಿಗೂ,

ಕ್ಷೇತ್ರಕಾರ್ಯ ಸಂದರ್ಭದಲ್ಲಿ ಅಧ್ಯಯನಕ್ಕೆ ಪೂರಕವಾದ ಮಾಹಿತಿ ಒದಗಿಸಿಕೊಟ್ಟ ವಿದ್ವಾಂಸರಾದ ಪ್ರೊ. ಕನರಾಡಿ ವಾದಿರಾಜ ಭಟ್ಟ, ಶ್ರೀ ಎಸ್.ವಿ. ಕೃಷ್ಣಯ್ಯ ಮತ್ತು ಶ್ರೀ ಬಿ. ಅಪ್ಪಣ್ಣ ಹೆಗ್ಡೆ, ಶ್ರೀ ಬಿ.ವಿ. ಬಳೆಗಾರ್, ಶ್ರೀ ಬಿ. ಲಕ್ಷ್ಮೀ ನಾರಾಯಣ ಉಪಾಧ್ಯ, ಶ್ರೀ ಸಖಾರಾಮ್ ರಾವ್, ಶ್ರೀ ಲಕ್ಷ್ಮೀನಾರಾಯಣ ಮಧ್ಯಸ್ಥ, ಶ್ರೀ ಬಿ. ಸುಧಾಕರನಾಯಕ್, ಶ್ರೀಮತಿ ಗೌರಿ, ಶ್ರೀಮತಿ ಲಲಿತ ಮತ್ತು ಹಿರಿಯಡ್ಕ ಗೋಪಾಲರಾವ್ ಅವರಿಗೆ,

ಪ್ರೀತಿಯ ಅಪ್ಪ, ಅಮ್ಮ ಹಾಗೂ ಅಣ್ಣಂದಿರಾದ ರಾಮಮೂರ್ತಿ, ರತ್ನಾಕರ್ ಮತ್ತು ಮನೆಯವರಿಗೆ,

ಪ್ರಬಂಧವನ್ನು ಅಂದವಾಗಿ ಸಕಾಲದಲ್ಲಿ ಸಂಯೋಜಿಸಿಕೊಟ್ಟ ಸೋಮನಾಥ ಕುಡಿತಿನಿ ಅವರಿಗೆ

**ತುಂಬು ಹೃದಯದ ಕೃತಜ್ಞತೆಗಳು**

ದಿನಾಂಕ : ೩೦.೦೪.೨೦೦೨      **ಪುತ್ತಿ ವಸಂತಕುಮಾರ್**

ಸ್ಥಳ : ವಿದ್ಯಾರಣ್ಯ      ಪುತ್ತಿಬೆಟ್ಟು

# ಬಸ್ರೂರಿನ ದೇವದಾಸಿ ಪದ್ಧತಿ

ಪರಿವಿಡಿ ಪುಟ – ಸಂಖ್ಯೆ

ಅಧ್ಯಾಯ : ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ

## ಅಧ್ಯಯನದ ಉದ್ದೇಶ

ಇಂದು ಜಾನಪದ ಅಧ್ಯಯನವು ಹೆಚ್ಚು ವಿಶಾಲವೂ ಜನಪ್ರಿಯವೂ ಆಗುತ್ತಿದೆ. ಇದು ಪ್ರಸ್ತುತ ಹೊಸ ಆಯಾಮಗಳನ್ನು ಪಡೆದುಕೊಳ್ಳುತ್ತಿರುವ ಅಧ್ಯಯನ ಪ್ರಕಾರ 'ಜಾನಪದ' ಅಥವಾ 'ಫೋಕ್‌ಲೋರ್ ' ಎಂಬ ಪದ ಇತ್ತೀಚಿನದಾದರೂ, ಜಾನಪದ ಕಲೆ ಧರ್ಮಗಳು ಮಾನವನೊಂದಿಗೆ ಹುಟ್ಟಿಕೊಂಡು ಬಂದಿವೆ. ಆದಿ ಮಾನವ ಚಿಂತನ ಶೀಲ ಮನುಷ್ಯನಾಗಿ ಬೆಳೆದು ಬಂದಂದಿನಿಂದಲೂ ಆತನಲ್ಲಿ ಸೃಜನ ಶೀಲತೆ, ಸಂವೇದನೆ ಹಾಗೂ ಸಂವಹನ ಪ್ರವೃತ್ತಿ ಬೆಳೆದು ಬಂದಿದೆ. ಆತನ ಎಲ್ಲಾ ಸಾಮಾಜಿಕ, ಧಾರ್ಮಿಕ, ಕಲಾತ್ಮಕ ಚಟುವಟಿಕೆಗೆ ಚಾಲನೆ ನೀಡಿ ಹಂತಹಂತವಾಗಿ ಸಾಂಸ್ಕೃತಿಕ ವೈಭವದ ಶಿಖರವನ್ನೇರುವಂತೆ ಮಾಡಿದವು. ಮೌಖಿಕ ಪರಂಪರೆಯಲ್ಲಿ ಬೆಳೆದು ಬಂದಿರುವ ಜನಪದ ಸಾಹಿತ್ಯ ಕಲೆ, ಆಚರಣೆ, ನಂಬಿಕೆ, ಸಂಪ್ರದಾಯಗಳು, ಅನಾದಿ ಕಾಲದಿಂದಲೂ ಆತ ಬೆಳೆಸಿಕೊಂಡು ಬಂದ ಸಮಾಜದ ಇಣುಕು ನೋಟಗಳನ್ನು ಒದಗಿಸಿಕೊಡುತ್ತವೆ. ಆದ್ದರಿಂದ ಜಾನಪದ ಕಲೆ, ಆಚರಣೆಗಳು ಮಾನವನ ಸಾಂಸ್ಕೃತಿಕ ಇತಿಹಾಸವನ್ನು ಅರಿಯುವಲ್ಲಿ ಮುಖ್ಯ ಸಾಧನಗಳಾಗುತ್ತವೆ. ಜಾನಪದ ಹಿಂದಿನ ಪರಂಪರೆಯನ್ನು ಇಂದಿಗೆ ತಲುಪಿಸುವ ಮುಖ್ಯ ಕಾರ್ಯವನ್ನು ಮಾಡುವುದು.

ಜಾನಪದ ಅಧ್ಯಯನ ಎಂಬುದು ನಿತ್ಯ ನಿರಂತರವಾದುದು. ಜನಾಂಗದ ಒಡಲಾಳದಿಂದ ಮೂಡಿ ಬಂದ ಈ ಜಾನಪದ ಮಾನವ ಜೀವನದ ಹಲವಾರು ರೋಚಕ ವಿವರಗಳನ್ನು ಒಳಗೊಂಡಿದೆ. ಬದುಕು ನಿಂತ ನೀರಲ್ಲ. ಅದು ಸದಾ ಪ್ರವಹಿಸುತ್ತಲೇ ಇರುತ್ತದೆ. ಹಾಗೇ ಜಾನಪದವು ನಿತ್ಯ ಪರಿವರ್ತನ ಶೀಲವಾದುದು. ಒಂದೊಂದು ಜನಾಂಗದ ಜಾನಪದವು ಅವರ ವೃತ್ತಿ, ಪರಿಸರ, ಜೀವನ ವಿಧಾನದ ಹಿನ್ನೆಲೆಯಲ್ಲಿ ಹಲವಾರು ವೈಶಿಷ್ಟ್ಯಗಳನ್ನೊಳಗೊಂಡಿದೆ. ಬದುಕಿನ ಕ್ಷೇತ್ರಗಳು ಭಿನ್ನವಾದಂತೆ ಜೀವನದ ಅನುಭಾವಗಳು ಭಿನ್ನವಾಗಿರುತ್ತವೆ.

ಆದಿ ಮಾನವನ ದೈವ ಪರಿಕಲ್ಪನೆಯೇ ಆತನ ಎಲ್ಲ ಕಲೆ ಸಾಹಿತ್ಯಗಳಿಗೂ ಮೂಲವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಏಕೆಂದರೆ ಆತನು ಅನಾದಿಕಾಲದಿಂದಲೂ ಪೋಷಿಸಿಕೊಂಡು ಬಂದ ಕಲೆಗಳೆಲ್ಲ ಆರಾಧನಾ

ಸಂದರ್ಭದಲ್ಲಿಯೇ ಹುಟ್ಟಿದವುಗಳು. ಆತ ದೈವದ ಬಗ್ಗೆ ಚಿಂತನೆ ನಡೆಸಿದ್ದು ಸಾಹಿತ್ಯಕ್ಕೆ ಮೂಲವಾದಂತೆ ದೈವದ ಮುಂದೆ ಹಾಡಿ ನಲಿದದ್ದು ಸಂಗೀತ, ನೃತ್ಯಗಳಿಗೆ ಮೂಲವಾಯಿತು. ಹೀಗೆ ಧಾರ್ಮಿಕ ಹಿನ್ನೆಲೆಯಲ್ಲಿ ಬೆಳೆದು ಬಂದಿರುವ ಸಂಪ್ರದಾಯವೊಂದರ ಔಚಿತ್ಯವನ್ನು ಇಲ್ಲಿ ವಿವೇಚಿಸಲಾಗಿದೆ.

ಜಾನಪದವನ್ನು ಲಿಂಗಭೇದದ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ಪ್ರವೃತ್ತಿ ಇಂದು ರೂಪುಗೊಂಡಿದೆ. ವಾಸ್ತವವಾಗಿ ಇದೊಂದು ಉತ್ತಮವಾದ ಬೆಳವಣಿಗೆ. ಒಂದು ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಅತ್ಯಂತ ಉಪಯುಕ್ತ ಮಾಹಿತಿಯನ್ನು ಕೊಡುವ ಜಾನಪದ, ಅನಕ್ಷರತೆ ಮತ್ತು ಪುರುಷ ಪ್ರಧಾನ ಸಮಾಜದ ಪ್ರಾಬಲ್ಯದ ಕಾರಣ ಬಹುತೇಕ ಹಿನ್ನೆಲೆಯಲ್ಲಿಯೇ ಉಳಿದ ಹೆಣ್ಣಿನ ಸ್ಥಿತಿಗತಿ ಮತ್ತು ಸ್ಥಾನ ಮಾನಗಳ ಬಗ್ಗೆ ನೈಜವಾದ ಮಾಹಿತಿಯನ್ನು ಕೊಡಬಲ್ಲದು. ಜಾನಪದದ ಬಗೆಗಿನ ಪರಿಕಲ್ಪನೆ ಬೆಳೆದಂತೆ ಅಧ್ಯಯನ ಕ್ಷೇತ್ರಗಳೂ ಬೆಳೆಯುತ್ತಿವೆ. ಮಹಿಳಾ ಅಧ್ಯಯನ ಮತ್ತು ಸಮಾಜ ಶಾಸ್ತ್ರಜ್ಞರು ಸಮಾಜ ಶಾಸ್ತ್ರೀಯ ನೆಲೆಯಲ್ಲಿ 'ದೇವದಾಸಿ' ಯರನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಇಲ್ಲಿ 'ಜಾನಪದೀಯ ನೆಲೆ' ಯಲ್ಲಿ 'ಬಸ್ರೂರಿನ ದೇವದಾಸಿ ಪದ್ಧತಿ' ಯ ಅಧ್ಯಯನ ಕೈಗೊಳ್ಳಲಾಗಿದೆ. ದೇವದಾಸಿಯರ ಗತಕಾಲದ ಶ್ರೀಮಂತ ಸಂಸ್ಕೃತಿಯನ್ನು ಮತ್ತು ಅಂದಿನ ಸಮಾಜದಲ್ಲಿ ಅವರಿಗಿದ್ದ ಸ್ಥಾನಮಾನವನ್ನು ಜನತೆಗೆ ಪರಿಚಯ ಮಾಡಿಸುವುದು ಈ ಅಧ್ಯಯನದ ಉದ್ದೇಶ.

ಜೀವನದ ಪ್ರತಿಯೊಂದು ರಂಗದಲ್ಲಿ ಪುರುಷನಿಗಿರುವಷ್ಟು ಸ್ಥಾನಮಾನಗಳು ಸ್ತ್ರೀಗೆ ಇರಬೇಕಾದುದು ಸಹಜ. ಆದರೆ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರ ಸ್ಥಾನಮಾನಗಳನ್ನು ಪುರುಷ ಪ್ರಧಾನ ವ್ಯವಸ್ಥೆಯು ತನ್ನ ಇಚ್ಛೆಯಂತೆ ಬಳಸಿಕೊಂಡಿದೆ. ಧರ್ಮದ ಮುಖವಾಡದಲ್ಲಿ ಅವರನ್ನು ಹೆದರಿಸುತ್ತ ಪುರುಷ ಪ್ರಧಾನ ವ್ಯವಸ್ಥೆಯು ತನ್ನ ಸ್ವಾರ್ಥ ಸಾಧಿಸಿದೆ. ಹೆಣ್ಣಿನ ಬದುಕಿನಲ್ಲಿ ಶೋಷಣೆ ಎನ್ನುವುದು ಅಗತ್ಯವೆನಿಸುವಷ್ಟು ಅನಿವಾರ್ಯವಾಗಿ ಜೀವನದ ಪ್ರತಿ ಹಂತದಲ್ಲೂ ಒಳಗೊಂಡಿದೆ. ಜನಪದ ಹೆಣ್ಣನ್ನು ಸವಿಯಾದ ಮಾತುಗಳಿಂದ, ರೀತಿಗಳಿಂದ ನಂಬಿಸಿ ಶೋಷಿಸಲಾಗಿದೆ. ಹೆಂಗಸರು ತಾವು ಗಂಡಸರ ಗುಲಾಮರೆಂದು ವರ್ತಿಸುವಂತೆ ಅವರನ್ನು ರೂಪಿಸಲಾಗಿದೆ, ಆರ್ಥಿಕ ಹಾಗೂ ಅಧಿಕಾರ ಬಲಗಳು ಪುರುಷರ ವಶದಲ್ಲಿ ಇರುವಂತಹ ಎಲ್ಲ ಸಂಸ್ಕೃತಿಗಳಲ್ಲಿಯೂ ಹೆಣ್ಣನ್ನು ಪುರುಷನ ಆಸ್ತಿಯಂತೆ ಭಾವಿಸಲಾಗಿದೆ. ಈ ಅಂಶ ಆಯಾ ಸಾಂಸ್ಕೃತಿಕ ಪರಿಸರದಲ್ಲಿ ಬೇರೆಯಾಗಿ ಅಭಿವ್ಯಕ್ತವಾಗಿದೆ. ಭಾರತೀಯ ಸಾಂಸ್ಕೃತಿಕ ಸಂದರ್ಭದಲ್ಲಿ ಆಯಾ ಧರ್ಮ, ಜಾತಿ, ಉಪಜಾತಿಗಳ ನೆಲೆಯಲ್ಲಿ ಮಹಿಳೆಯರ ಜೀವನ ವಿಧಾನ, ಸಾಮಾಜಿಕ ಸ್ಥಾನ ಮಾನಗಳು ವಿಭಿನ್ನವಾಗಿದ್ದರೂ ಶೋಷಣೆ ಮಾತ್ರ ಒಂದೇ ಮೂಲದಿಂದ ನಡೆದಿದೆ. ಈ ಅಂಶಗಳನ್ನು ಮೀರಿ ಸಾಮಾಜಿಕ ಜೀವನದ ವ್ಯವಸ್ಥಿತ ನಡೆಗೆ ಒಂದು ನೀತಿ ಸಂಹಿತೆ ಬೇಕೆಂದು ಆಡಳಿತಾತ್ಮಕ ವಿಧಾನವೊಂದು ಜನಪದರ ಬದುಕಿನ ದೈನಂದಿನ ಜೀವನಕ್ಕೆ ಅವಶ್ಯವೆನಿಸುತ್ತದೆ. ಲಿಂಗ ತಾರತಮ್ಯದ ಹಿನ್ನೆಲೆಯಲ್ಲಿ ಕಾಣಿಸಿಕೊಂಡ ಲೈಂಗಿಕ ಶೋಷಣೆ ಮಾನವ ಚರಿತ್ರೆಯಲ್ಲಿ ಕಾಣಿಸಿಕೊಂಡ ವಿಚಿತ್ರ ಶೋಷಣೆಯಾಗಿದೆ. ಈ

ಹಿನ್ನೆಲೆಯಲ್ಲಿ ಪುರೋಹಿತ ಶಾಹಿ ಹಾಗೂ ಆಡಳಿತ ಶಾಹಿಗಳು ದೇವದಾಸಿಯರನ್ನು ಸೃಷ್ಟಿಸಿ ಬೆಳೆಸಿದ್ದೊಂದು ಭಾರತದ ಸಾಂಸ್ಕೃತಿಕ ದುರಂತ. ದೇವದಾಸಿ ಸಂಪ್ರದಾಯಕ್ಕೆ ಧಾರ್ಮಿಕ ಮೌಲ್ಯಗಳನ್ನು ಆರೋಪಿಸಿ, ಅವರನ್ನು ಕುಲವೃತ್ತಿಯಲ್ಲಿ ಮುಂದುವರಿಯುವಂತೆ ಉತ್ತೇಜಿಸಲಾಯಿತು. ದೇವದಾಸಿಯಾದವಳು ನಿತ್ಯ ಮುತ್ತೈದೆ ಅವಳು ಶುಭಕರಳು, ಆದ್ದರಿಂದ ಶ್ರೇಷ್ಠಳು ಎಂದು ಪುರೋಹಿತ ಶಾಹಿ ಸಂಸ್ಕೃತಿ ವ್ಯಾಖ್ಯಾನಿಸಿದ್ದನ್ನು ಒಪ್ಪಿಕೊಳ್ಳುವುದು ಕಷ್ಟವಾಗುತ್ತದೆ. ಅವಳ ವೈವಾಹಿಕ ಜೀವನ ಹಾಗೂ ದೇವಾಲಯದಲ್ಲಿಯ ಅವಳ ಮಹತ್ವವು ಸಾಮಾಜಿಕವಾಗಿ, ಧಾರ್ಮಿಕವಾಗಿ ಅವಳಿಗಿರುವ ಕನಿಷ್ಠ ಸ್ಥಾನಮಾನಗಳನ್ನು ಬಹಿರಂಗ ಪಡಿಸುತ್ತದೆ.

'ಗೆಜ್ಜೆ ಕಟ್ಟಿದ' ದೇವದಾಸಿಯರನ್ನು ಸಮಾಜವು ಬಸವಿಯರು, ಸೂಳೆಯರು, ಎಂದು ತಪ್ಪಾಗಿ ಗ್ರಹಿಸಿದೆ. ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಗೆಜ್ಜೆಕಟ್ಟಿದವರು ಇವರೆಲ್ಲರಿಗಿಂತ ಭಿನ್ನರು. ಅವರ ಕೌಟುಂಬಿಕ ಜೀವನದಲ್ಲಿ ಅತ್ಯಂತ ಪ್ರಾಮುಖ್ಯವಾಗಿರುವ ಹೆಣ್ಣುಮಗುವಿನ ಜನನ, ಋತುಮತಿ ಆಚರಣೆ, ಶೋಭನ ಪ್ರಸ್ಥ, ಮೊದಲಾದವುಗಳನ್ನು ವಿಶ್ಲೇಷಣೆಗೆ ಗುರಿಪಡಿಸುವುದರೊಂದಿಗೆ ಅವರ ಮಾತೃಮೌಲೀಯ ಪದ್ಧತಿಯ ಔಚಿತ್ಯವನ್ನು ಪ್ರಶ್ನಿಸಬೇಕಿದೆ. ಉನ್ನತ ವರ್ಗದವರು ದೇವದಾಸಿಯರೊಂದಿಗೆ ಸಂಪರ್ಕವಿಟ್ಟುಕೊಂಡಿದ್ದರೂ, ಕೌಟುಂಬಿಕ ನೆಲೆಯಲ್ಲಿ ಅವರು ಕಾಯ್ದುಕೊಂಡು ಬಂದ ಸಾಮಾಜಿಕ ಅಂತರಗಳನ್ನು ಸೂಕ್ಷ್ಮವಾಗಿ ಗುರುತಿಸುತ್ತ ಅವರ ಸಾಮಾಜಿಕ ಸ್ಥಾನಮಾನಗಳನ್ನು ಗಮನಿಸುತ್ತ, ಆಧುನಿಕತೆಯಲ್ಲಾದ ಅವರ ಸಾಮಾಜಿಕ ಸ್ಥಿತ್ಯಂತರಗಳನ್ನು ವಿಶ್ಲೇಷಣೆಗೆ ಗುರಿಪಡಿಸುವ ಅಗತ್ಯವಿದೆ. ಒಂದು ಕಾಲದಲ್ಲಿ ಐತಿಹಾಸಿಕವಾಗಿ ಮಹತ್ವ ಪಡೆದಿರುವ ಬಸ್ರೂರಿನಲ್ಲಿ ಇಂದು ದೇವದಾಸಿ ಪದ್ಧತಿ ಸಂಪೂರ್ಣ ನಿಂತುಹೋಗಿದೆ. ಈ ಜನಾಂಗದವರು ಇಂದು 'ಕಲಾವಂತ ಸಮಾಜ'ವೆಂದು ಸಮಾಜದಲ್ಲಿ ಗುರುತಿಸಿಕೊಳ್ಳುತ್ತಿದ್ದಾರೆ. ಆದರೂ ಈ ಸಮುದಾಯದವರಿಗೆ ತಮ್ಮ ಹಿಂದಿನ ಪರಂಪರೆಯ ಬಗ್ಗೆ ಕೀಳರಿಮೆ ಇದೆ. ಅವರಲ್ಲಿ ಆತ್ಮ ವಿಶ್ವಾಸವನ್ನು ಹೆಚ್ಚಿಸುವಂತೆ ಮಾಡಬೇಕಾದ ಅಗತ್ಯವಿದೆ.

'ಸಾಮಾಜಿಕವಾಗಿ ಪರಿಧಿಗೆ ತಳ್ಳಲ್ಪಟ್ಟ ಮತ್ತು ಸಾಮಾಜಿಕ ಕೀಳರಿಮೆಗೆ (stigma) ಗುರಿಯಾದ ಈ ಸಮುದಾಯದ ಸಾಂಸ್ಕೃತಿಕ ಹಿರಿಮೆಯನ್ನು ಪುನರ್ ರಚಿಸುವುದು ಮತ್ತು ಸಮಾಜ ಅವರ ಬಗೆಗೆ ಗೌರವ ಭಾವನೆಯನ್ನು ತಾಳುವಂತೆ ಮಾಡುವುದು' ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಆ ಸಮುದಾಯದಲ್ಲಿದ್ದ ಒಂದು ಶ್ರೀಮಂತ ಕಲೆಯನ್ನು ಆಧುನಿಕ ಸಂದರ್ಭಕ್ಕೆ ಮರು ರಚಿಸುವ ಅವಶ್ಯಕತೆ ಇದೆ. ಈ ಬಗ್ಗೆ ಜನಾಭಿಪ್ರಾಯ ರೂಢಿಸಬೇಕಾಗಿದೆ. ಇವರ ವ್ಯಕ್ತಿಗತ ಅನುಭವಗಳನ್ನು ಜಾನಪದ, ಮತ್ತು ಸಾಂಸ್ಕೃತಿಕ ನೆಲೆಯಲ್ಲಿ ಇಟ್ಟು ವಿಶ್ಲೇಷಣೆಗೊಳಪಡಿಸುವ ಅಗತ್ಯವಿದೆ. ಭಾರತೀಯ ಸಂಸ್ಕೃತಿಯಲ್ಲಿ ಧಾರ್ಮಿಕ ಹಿನ್ನೆಲೆಯುಳ್ಳ ರಂಗಭೋಗದಲ್ಲಿ ತೋರಿಕೆಗೆ ಪ್ರಾಧಾನ್ಯತೆಯನ್ನು ಪಡೆದುಕೊಂಡು, ಇತ್ತೀಚಿನವರೆಗೂ ಪ್ರಚಲಿತದಲ್ಲಿದ್ದ ದೇವದಾಸಿಯರ ಬದುಕಿನ ವಿವರಗಳು, ಧಾರ್ಮಿಕ ಹಾಗೂ ಸಾಮಾಜಿಕ ಸ್ಥಾನಮಾನಗಳು, ಶೋಷಣೆಗಳು, ಇವೆಲ್ಲವುಗಳನ್ನೂ ವಿಶ್ಲೇಷಣೆಗೆ

ಒಳಪಡಿಸಬೇಕಾದ ತುರ್ತು ಅಗತ್ಯವಿದೆ. ಯಾವುದೇ ಒಂದು ಜಾತಿ ತನ್ನದೇ ಆದ ಆಚಾರ, ವಿಚಾರ ನಡವಳಿಕೆ, ಸಂಪ್ರದಾಯ, ದೈವ, ದೇವರು ಮುಂತಾಗಿ ರೂಢಿಸಿಕೊಂಡಿರುತ್ತದೆ. ಈ ದೃಷ್ಟಿಯಲ್ಲಿ ಕಲಾವಂತರ ಬದುಕಿನ ಹಲವು ಮಜಲುಗಳ ಅಧ್ಯಯನ ನಡೆಸುವ ಮತ್ತು ಒಟ್ಟು ಭಾರತೀಯ ಸಂಸ್ಕೃತಿಗೆ ಇವರ ಕೊಡುಗೆಯನ್ನು ಗಮನಿಸುವುದು ಅಗತ್ಯವಾಗಿದೆ. ಅಲ್ಲದೆ ಉತ್ತರ ಕರ್ನಾಟಕದ ಇತರ ಭಾಗಗಳಲ್ಲಿ 'ದೇವದಾಸಿ ಪದ್ಧತಿ' ಇಂದಿಗೂ ಜೀವಂತವಾಗಿದೆ. ಅದರ ನಿರ್ಮೂಲನೆಗೆ ಕಾರಣಗಳನ್ನು ಹುಡುಕಲು ಸಾಧ್ಯವೇ? ಎನ್ನುವುದನ್ನು ಪ್ರಶ್ನಿಸಬೇಕಾಗಿದೆ. ಈ ಎಲ್ಲ ಉದ್ದೇಶಗಳ ಹಿನ್ನೆಲೆಯಲ್ಲಿ ಈ ಪ್ರೌಢ ಪ್ರಬಂಧ ರೂಪಗೊಂಡಿದೆ.

## ವ್ಯಾಪ್ತಿ ಮತ್ತು ಸ್ವರೂಪ

ಪ್ರಸ್ತುತ ಅಧ್ಯಯನಕ್ಕೆ ಐತಿಹಾಸಿಕ ಕ್ಷೇತ್ರವಾದ 'ಬಸರೂರನ್ನು' ಕಾರ್ಯಕ್ಷೇತ್ರವಾಗಿ ರೂಪಿಸಿಕೊಳ್ಳಲಾಗಿದೆ. ಇದು ಬಸ್ರೂರಿನ ವ್ಯಾಪ್ತಿಗೆ ಸೀಮಿತವಾಗಿದ್ದರೂ ಒಟ್ಟು ಕರ್ನಾಟಕ ಹಾಗೂ ಭಾರತೀಯ ಸಂದರ್ಭದಲ್ಲಿ ಪ್ರಚಲಿತದಲ್ಲಿದ್ದ ದೇವದಾಸಿ ಸಂಪ್ರದಾಯದ ಕಡೆಗೆ ಹರಡಿಕೊಂಡಿದೆ. ಈ ಅಧ್ಯಯನವನ್ನು ಜಾನಪದೀಯ ನೆಲೆಯಲ್ಲಿ ಕೈಗೊಂಡಿದ್ದು ಆ ಮೂಲಕ ದೇವದಾಸಿಯರ ಗತಕಾಲದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

ಈ ಅಧ್ಯಯನದ ಹೆಚ್ಚಿನ ಭಾಗವನ್ನು ಕ್ಷೇತ್ರ ಕಾರ್ಯದ ಮೂಲಕ ವಿಶ್ಲೇಶಿಸಲಾಗಿದೆ. ಜೊತೆಗೆ ವಿದ್ವಾಂಸರೊಂದಿಗಿನ ಚರ್ಚೆ ಮತ್ತು ಸಾಹಿತ್ಯ ಗ್ರಂಥಗಳ ಪರಾಮರ್ಶೆಯನ್ನು ಮಾಡಲಾಗಿದೆ. ಎಂಟು ಅಧ್ಯಾಯಗಳನ್ನೊಳಗೊಂಡಿರುವ ಈ ಅಧ್ಯಯನದ ಮುಂದಿನ ಭಾಗದಲ್ಲಿ ಬಸ್ರೂರಿನ ಭೌಗೋಳಿಕ ಪರಿಚಯ ಮತ್ತು ಅಲ್ಲಿಯ ಐತಿಹಾಸಿಕ ಹಿನ್ನೆಲೆಯನ್ನು ಕೊಡಲಾಗುವುದು. ಭೌಗೋಳಿಕ ಪರಿಚಯದಲ್ಲಿ ಊರಿನ ವಿಸ್ತೀರ್ಣ, ಊರಿನ ವಿಭಿನ್ನ ಸಮುದಾಯಗಳು, ಮತ್ತು ಅವರ ಭಾಷೆ, ಊರಿನ ಗುಡಿ ಗೋಪುರಗಳ ವಿವರಗಳೆಲ್ಲವನ್ನು ನಮೂದಿಸಲಾಗುವುದು. ಅಧ್ಯಾಯ ಮೂರರಲ್ಲಿ ದೇವದಾಸಿ ಪರಂಪರೆಯ ಹಿನ್ನೆಲೆ ಮತ್ತು ಬೆಳವಣಿಗೆ, ದೇವದಾಸಿ ಪದ್ಧತಿಗೆ ಪ್ರೇರಣೆ ಮೊದಲಾದ ಅಂಶಗಳನ್ನು ಸೂಚಿಸಲಾಗುವುದು. ಇಲ್ಲಿ ಸಾಹಿತ್ಯ ಗ್ರಂಥಗಳನ್ನೇ ಮುಖ್ಯ ಆಕರವಾಗಿ ಬಳಸಿಕೊಳ್ಳಗುವುದು. ನಾಲ್ಕನೇ ಅಧ್ಯಾಯವು ದೇವದಾಸಿಯರ ಆಚರಣೆಗೆ ಸಂಬಂಧಿಸಿದ್ದು ಸಂಪೂರ್ಣ ಕ್ಷೇತ್ರ ಕಾರ್ಯದಿಂದ ರೂಪುಗೊಂಡಿದೆ. ಇಲ್ಲಿ ದೇವದಾಸಿಯರ ಜೀವನಾವರ್ತನ, ವಾರ್ಷಿಕಾವರ್ತನ ಮತ್ತು ವಿಶೇಷ ಆಚರಣೆಗಳಿಗೆ ಮಹತ್ವ ನೀಡಲಾಗುವುದು. ಐದನೇ ಅಧ್ಯಾಯದಲ್ಲಿ ದೇವದಾಸಿಯರ ಕೌಟುಂಬಿಕ ಬದುಕಿನ ಕಡೆಗೆ ಗಮನ ನೀಡಲಾಗುವುದು. ಇಲ್ಲಿ ದೇವದಾಸಿಯರ ಒಳಪಂಗಡಗಳು, ಕುಟುಂಬ ರಚನೆಯ ವಿಕಾಸ, ವಾಸ್ತು ವೈಶಿಷ್ಟ್ಯ ಮೊಲಾದವುಗಳನ್ನು ವಿವರಿಸಲಾಗುವುದು. ಕುಟುಂಬದಲ್ಲಿ ಗಂಡಸರ ಪ್ರಾಮುಖ್ಯತೆ ಏನು? ಎನ್ನುವುದನ್ನು

ವಿವರಿಸಲಾಗುವುದು. ಆರನೇ ಅಧ್ಯಾಯದಲ್ಲಿ ದೇವದಾಸಿ ಮತ್ತು ಸಂಸ್ಕೃತಿಯನ್ನು ಕುರಿತು ಉಲ್ಲೇಖಿಸಲಾಗಿದ್ದು, ಇದರಲ್ಲಿ ದೇವದಾಸಿಯರಿಗೆ ದೇವಾಲಯದಲ್ಲಿರುವ ಮಹತ್ವ, ದೇವದಾಸಿಯರ ಲಲಿತ ಕಲೆಗಳು, ಮತ್ತು ದೇವದಾಸಿಯರೊಂದಿಗಿನ ಊರಿನ ಜನರ ಸಂಬಂಧಗಳನ್ನು ಉಲ್ಲೇಖಿಸಲಾಗುವುದು. ಇಲ್ಲಿ ಕ್ಷೇತ್ರಕಾರ್ಯ ಮತ್ತು ವಿದ್ವಾಂಸರೊಂದಿಗಿನ ಚರ್ಚೆಯನ್ನು ಮೂಲ ಆಕರವಾಗಿ ಬಳಸಿಕೊಳ್ಳಲಾಗಿದೆ. ಏಳನೇ ಅಧ್ಯಾಯದಲ್ಲಿ ಬಸ್ರೂರಿನ ದೇವದಾಸಿ ಪದ್ಧತಿಯ ಸ್ಥಿತ್ಯಂತರದ ಕಾರಣಗಳನ್ನು ವಿವರಿಸಲಾಗುವುದು.

ಅಲ್ಲದೆ ಪ್ರಸ್ತುತ ಬದಲಾದ ಸಂದರ್ಭದಲ್ಲಿ ಈ ಸಮುದಾಯದ ಸ್ಥಿತಿ ಗತಿ ಹೇಗಿದೆ? ತಮ್ಮ ಪರಂಪರೆಯ ಬಗ್ಗೆ ಈ ಜನಾಂಗದ ವಿದ್ಯಾವಂತ ಯುವಕರ ನಿಲುವೇನು? ಮೊದಲಾದ ವಿಷಯಗಳನ್ನು ಚರ್ಚಿಸಲಾಗುವುದು.

ಕೊನೆಯ ಅಧ್ಯಾಯದಲ್ಲಿ ಒಟ್ಟಿನ ಅಧ್ಯಯನದಿಂದ ವ್ಯಕ್ತವಾದ ಸಂಶೋಧನೆಯ ಮುಖ್ಯ ಅಂಶಗಳನ್ನು ರೇಖಿಸಲಾಗುವುದು. ಇದಕ್ಕೆ ಹೊಂದಿಕೊಂಡ ಅನುಬಂಧದಲ್ಲಿ ವಕ್ತೃ ಮಾಹಿತಿ ಮತ್ತು ದೇವದಾಸಿಯರ ಕೆಲವು ಹಾಡುಗಳು, ದೇವದಾಸಿರಿಗೆ ಮತ್ತು ಬಸ್ರೂರಿಗೆ ಸಂಬಂಧಿಸಿದ ಕೆಲವು ಛಾಯಾಚಿತ್ರಗಳನ್ನು, ಅಧ್ಯಯನ ಸಂದರ್ಭದಲ್ಲಿ ಬಳಸಿಕೊಂಡ ಆಧಾರ ಗ್ರಂಥಗಳ ಯಾದಿಯನ್ನು ಕೊಡಲಾಗುವುದು.



ಅಧ್ಯಾಯ : ೨

# ಬಸ್ರೂರು ಗ್ರಾಮ

೨.೧ ಭೌಗೋಳಿಕ ಪರಿಚಯ

೨.೨ ಚಾರಿತ್ರಿಕ ಹಿನ್ನೆಲೆ

೨.೩ ಧಾರ್ಮಿಕ ಹಿನ್ನೆಲೆ

## ಅಧ್ಯಾಯ : ೨

# ಬಸ್ರೂರು ಗ್ರಾಮ

ಅಧ್ಯಯನಕ್ಕೆ ಒಳಪಡಿಸಲಿರುವ ಗ್ರಾಮದ ಭೌಗೋಳಿಕ ಪರಿಸರ. ಮತ್ತು ಚಾರಿತ್ರಿಕ ವಿವರಣೆ ಬಹುಮುಖ್ಯವಾದುದು. ಬಹಳಷ್ಟು ಸಲ ಭೌಗೋಳಿಕ ಪರಿಸರವೇ ಗ್ರಾಮೀಣ ಜೀವನ ಸ್ವರೂಪವನ್ನು ನಿರ್ಧರಿಸುತ್ತದೆ, ಮತ್ತು ನಿಯಂತ್ರಿಸುತ್ತದೆ. ಒಂದು ಜನಾಂಗದ ಜೀವನ ಕ್ರಮ, ಊಟ, ಉಡುಗೆ, ತೊಡುಗೆಗಳು ಆ ಭಾಗದ ಭೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತದೆ. ಊರಿನ ಮೇರೆಗಳು, ಕೇರಿಗಳು, ದಾರಿಗಳು, ಊರಿನ ರಚನೆಯನ್ನು ತಿಳಿಸುತ್ತವೆ. ಊರ ಸುತ್ತಲಿನ ಪ್ರಾಕೃತಿಕ ರಚನೆ, ಬಯಲು, ನದಿ, ಬೆಟ್ಟ, ಸಮುದ್ರ, ಇವುಗಳನ್ನು ಹೊರತುಪಡಿಸಿ ಗ್ರಾಮ ಜೀವನವನ್ನು ನೋಡಲಾಗುವುದಿಲ್ಲ. ಭೌಗೋಳಿಕ ವಿವರಣೆಯು ಒಂದು ಗ್ರಾಮದಲ್ಲಿ ವಾಸಿಸುವ ಜನಾಂಗದ ಅಧ್ಯಾಯನದಲ್ಲಿ ಬಹುಮುಖ್ಯವಾದದೆನಿಸುತ್ತದೆ. ಚಾರಿತ್ರಿಕ ಹಿನ್ನೆಲೆಯು ಗ್ರಾಮವು ಐತಿಹಾಸಿಕವಾಗಿ ಪಡೆದ ಮಹತ್ವವನ್ನು ತಿಳಿಸುತ್ತದೆ. ಪ್ರಸ್ತುತ ಅಧ್ಯಾಯದಲ್ಲಿ ಬಸ್ರೂರಿನ ಭೌಗೋಳಿಕ ಪರಿಚಯ ಮತ್ತು ಚಾರಿತ್ರಿಕ ಹಿನ್ನೆಲೆಯನ್ನು ವಿವರಿಸಲಾಗಿದೆ.

### ೨. ೧. ಭೌಗೋಳಿಕ ಪರಿಚಯ

ತುಳುನಾಡಿನ ಐತಿಹಾಸಿಕ ಪಟ್ಟಣಗಳಲ್ಲೊಂದಾದ ಬಸ್ರೂರು ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನಲ್ಲಿದೆ. ಕುಂದಾಪುರ ತಾಲೂಕು ಕೇಂದ್ರದಿಂದ ಸುಮಾರು ಏಳು ಕಿಲೋಮೀಟರುಗಳ ಅಂತರದಲ್ಲಿದೆ. ಇಂದು ಈ ಊರು ಗ್ರಾಮ ಪರಿಚಾಯತು ಆಡಳಿತಕ್ಕೊಳಪಟ್ಟಿದ್ದರೂ, ಚಾರಿತ್ರಿಕ ಕಾಲದಲ್ಲಿ ಸಾಕಷ್ಟು ಮೆರೆದ ಹಾಗೂ ಪ್ರಸಿದ್ಧಿ ಪಡೆದ ಪಟ್ಟಣವಾಗಿತ್ತು. ವಾರಾಹಿ ನದಿಯ ತೀರದಲ್ಲಿರುವ ಈ ಪಟ್ಟಣವು ಒಂದೆ ಪ್ರಸಿದ್ಧ ಬಂದರಾಗಿ, ಅರೇಬಿಯಾ, ಈಜಿಪ್ಟ್ , ಮುಂತಾದ ದೇಶಗಳೊಡನೆ ವ್ಯಾಪಾರ ಸಂಪರ್ಕವನ್ನು ಕಲ್ಪಿಸಿತ್ತು. ಇದು ಕರಾವಳಿಯ ಪಾಲಿಗೆ ಪೂರ್ವ ಪರಂಪರೆಯ ಹಲವು ದೇವಸ್ಥಾನಗಳುಳ್ಳ ಊರು. ಸಾಮಾಜಿಕ, ರಾಜಕೀಯ ವೈಶಿಷ್ಟವುಳ್ಳ ಪ್ರದೇಶ. ಅಷ್ಟೇ ಅಲ್ಲದೆ ಆರ್ಥಿಕ ವ್ಯವಹಾರಗಳ ಕೇಂದ್ರವೂ ಆಗಿತ್ತು.

ಬಸ್ರೂರು ಗ್ರಾಮದ ಒಟ್ಟು ವಿಸ್ತೀರ್ಣ ಸುಮಾರು ೧೪೨೪ ಎಕ್ರೆ ೧೯೯೧ ರ ಜನಗಣಿಯ ಪ್ರಕಾರ ಇಲ್ಲಿಯ ಒಟ್ಟು ಜನ ಸಂಖ್ಯೆ ೬೪೭೬. ಇಲ್ಲಿಯ ಜನರ ಆಡು ಭಾಷೆ ಕುಂದಾಪುರ ಪರಿಸರದ 'ಪ್ರಾದೇಶಿಕ ಕನ್ನಡ' ಈ ಊರು ಕರಾವಳಿಯ ಬಯಲು ಪ್ರದೇಶವಾಗಿದ್ದು, ಬತ್ತ, ಕಬ್ಬು, ತೆಂಗು ಮೊದಲಾದ ಬೆಳೆಗಳನ್ನು ಬೆಳೆಸುತ್ತಾರೆ.

ಬಸ್ರೂರು ಗ್ರಾಮದ ಉತ್ತರ ದಿಕ್ಕಿನಲ್ಲಿ ವಾರಾಹಿ ನದಿಯು ಇಡೀ ಗ್ರಾಮವನ್ನೇ ಸೀಳಿಕೊಂಡು ಸಮುದ್ರಾಭಿಮುಖವಾಗಿ ಹರಿಯುತ್ತಿದೆ. ಪೂರ್ವದಿಂದ ಪಶ್ಚಿಮಕ್ಕೆ ಹರಿಯುವ ಈ ನದಿಯು ಹಿಂದೆ ಬಸ್ರೂರು ನಗರಕ್ಕೆ ರಕ್ಷಣೆಯಾಗಿತ್ತು. ಇದೇ ನದಿಯ ಇನ್ನೊಂದು ಕವಲು ಹಟ್ಟಿಕುದುರು ಎಂಬ ನಡುಗಡ್ಡೆಯನ್ನು ಸುತ್ತುವರಿದು ಹರಿಯುತ್ತಿದೆ. ವಾರಾಹಿ ನದಿಯ ಉತ್ತರಕ್ಕೆ ಹಟ್ಟಿ ಅಂಗಡಿ, ಈಶಾನ್ಯಕ್ಕೆ ಗುಲ್ವಾಡಿಗಳಿವೆ. ಬಸ್ರೂರಿನ ಪೂರ್ವದಲ್ಲಿ ಬಳ್ಕೂರು, ಆಗ್ನೇಯದಲ್ಲಿ ಜಪ್ತಿ, ದಕ್ಷಿಣದಲ್ಲಿ ಕಂದಾವರ, ಪಶ್ಚಿಮದಲ್ಲಿ ಆನಗಳ್ಳಿ ಗ್ರಾಮಗಳಿವೆ. ಹಿಂದೆ ಈ ಗ್ರಾಮಗಳೆಲ್ಲ ಬಸ್ರೂರು ಮಾಗಣೆಗೆ ಸೇರಿದ್ದವು.

ಬಸ್ರೂರು ಹಿಂದೆ ವ್ಯವಸ್ಥಿತವಾದ ಒಂದು ನಗರವಾಗಿತ್ತು. ಇದೊಂದು ನಗರವಾಗಿತ್ತು ಎನ್ನುವುದಕ್ಕೆ ಸಾಕಷ್ಟು ಪುರಾವೆಗಳು, ಅವಶೇಷಗಳು ಉಳಿದುಕೊಂಡಿವೆ. ಇಲ್ಲಿ ಏಳು ಕೇರಿಗಳಿವೆ. ಏಳು ಕೆರೆಗಳಿವೆ. ಇಪ್ಪತ್ತೇಳು ದೇವಸ್ಥಾನಗಳು, ನಲ್ವತ್ತು ದೈವದ ಗುಡಿಗಳು, ನಾಲ್ಕು ಗರಡಿ ಮನೆಗಳು, ಎರಡು ಮಸೀದಿಗಳು, ಎರಡು ಕ್ರೈಸ್ತ ಪ್ರಾರ್ಥನಾ ಮಂದಿರಗಳಿವೆ. ಅಲ್ಲದೆ ಎರಡು ಮಠಗಳು, ಎರಡು ಅಗ್ರಹಾರಗಳು ಕೂಡಾ ಇವೆ. ಶೈಕ್ಷಣಿಕ ಕೇಂದ್ರಗಳಾಗಿ ಐದು ಮಾಧ್ಯಮಿಕ ಶಾಲೆಗಳು, ಎರಡು ಪ್ರೌಢ ಶಾಲೆಗಳು, ಹಾಗು ಒಂದು ಪ್ರಥಮ ದರ್ಜೆ ಕಾಲೇಜು ಇದೆ. ಅಂಚೆ ಕಛೇರಿ, ರಾಷ್ಟ್ರೀಕೃತ ಬ್ಯಾಂಕು, ಸಹಕಾರಿ ಸಂಘ, ದೂರವಾಣಿ ಕೇಂದ್ರ, ಆಸ್ಪತ್ರೆ, ಪಂಚಾಯತ್ ಕಛೇರಿ, ಈಶ್ವರೀಯ ವಿಶ್ವವಿದ್ಯಾಲಯ ಕೇಂದ್ರ, ಭೀಮ ಸಂಘ ಮತ್ತು ಪ್ರಸಿದ್ಧವಾದ ಬಸ್ರೂರು ಬಳಕೆದಾರರ ವೇದಿಕೆ: ಮೊದಲಾದವುಗಳೆಲ್ಲವೂ ತಮ್ಮ ಕಾರ್ಯ ನಿರ್ವಹಿಸುತ್ತಿವೆ.

ಮೊದಲೇ ತಿಳಿಸಿರುವಂತೆ ಇಲ್ಲಿ ಏಳು ಕೇರಿಗಳಿವೆ. ಈ ಎಲ್ಲ ಕೇರಿಗಳು ಊರಿನ ನಡುವೆ ಇರುವ ಮಹಾಲಿಂಗೇಶ್ವರ ದೇವಾಲಯದ ಮುಂದೆ ಸಂಗಮವಾಗುತ್ತವೆ. ಹಿಂದಿನ ಕಾಲದಲ್ಲಿ ಈ ಕೇರಿಗಳ ಹೊರಭಾಗದಲ್ಲಿ ಪ್ರವೇಶ ದ್ವಾರಗಳಿದ್ದು ರಾತ್ರಿಯ ಹೊತ್ತು ಅವುಗಳನ್ನು ಮುಚ್ಚುತ್ತಿದ್ದರಂತೆ. ಇಂದು ಅಲ್ಲಲ್ಲಿ ಅವುಗಳ ಅವಶೇಷಗಳು ಮಾತ್ರ ಉಳಿದಿವೆ. ಆ ಎಲ್ಲ ಕೇರಿಗಳೂ ಇಂದಿಗೂ ತಮ್ಮ ಮೂಲದ ಹೆಸರಿನಲ್ಲಿಯೇ ಕರೆಸಿಕೊಳ್ಳುತ್ತವೆ. ಅವುಗಳನ್ನು ಮುಂದೆ ವಿವರವಾಗಿ ಸೂಚಿಸಲಾಗಿದೆ.

**೧. ಮಂಡಿಕೇರಿ :** ಊರಿನ ಪ್ರಮುಖ ಮಂದಿರ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಎಡಭಾಗದಿಂದ ಉತ್ತರಾಭಿಮುಖವಾಗಿ ವಾರಾಹಿ ನದಿಯ ಕಡೆಗೆ ಇರುವ ಬೀದಿಯೇ ಮಂಡಿಕೇರಿ. ಹಿಂದೆ ಇದು ನಾವೆಗಳು ಬಂದು

ನಿಲ್ಲುವ ಬಂದರು ಪ್ರದೇಶವಾಗಿದ್ದು, ಇಲ್ಲಿ ಸಗಟು ವ್ಯಾಪಾರಿಗಳ ಮಂಡಿಗಳು ಇರುತ್ತಿದ್ದವು. ಆದ್ದರಿಂದಲೇ ಇದಕ್ಕೆ 'ಮಂಡಿಕೇರಿ'ಯೆಂದು ಹೆಸರಾಗಿದೆಯಂತೆ. ಇದರ ಉದ್ದ ಸುಮಾರು ೨೦೦ ಮೀಟರುಗಳು. ಈ ಬೀದಿಯ ಇಕ್ಕೆಲಗಳಲ್ಲಿಯೂ ಹಳೆಯ ಕಾಲದ ಮನೆಗಳಿವೆ. ಈ ಮನೆಗಳ ಜಗುಲಿಗಳು ರಸ್ತೆಗೆ ತಾಗಿಕೊಂಡಿರುವುದನ್ನು ಇಲ್ಲಿ ಗಮನಿಸಬಹುದು. ಮಂಡಿಕೇರಿಯ ಬಂದರು ಪ್ರವೇಶಕ್ಕೆ 'ಮಂಡಿಬಾಗಿಲು' ಎಂದು ಹೆಸರು. ಇದು ಬಂದರು ಆಗಿದ್ದುದರಿಂದ ನಾವೆಗಳಿಂದ ಸರಕು ಇಳಿಸಲು ಹಾಗೂ ನಾವೆಗಳಿಗೆ ಸರಕು ತುಂಬಿಸಲು ಸಹಾಯಕವಾಗುವಂತೆ ಶಿಲಾಹಲಗೆಗಳಿಂದ ನಿರ್ಮಿಸಿದ 'ಜೆಟ್ಟಿ'ಯಿದೆ. ಮಂಡಿಕೇರಿಯಲ್ಲಿ ಗೌಡ ಸಾರಸ್ವತರ ದೇವಸ್ಥಾನಗಳಲ್ಲಿ ಒಂದಾಗ 'ಶ್ರೀ ಮಹಾಲಾಸ ನಾರಾಯಣೀ ದೇವಾಸ್ಥಾನ'ವಿದೆ.

**೨. ವಿಲಾಸಕೇರಿ :** ಮಂಡಿ ಕೇರಿಯ ಪೂರ್ವದಿಕ್ಕಿನಲ್ಲಿ ಸಮಾನ ಅಂತರದಲ್ಲಿ ಇನ್ನೊಂದು ಕೇರಿಯಿದೆ. ಇದನ್ನು 'ವಿಲಾಸಕೇರಿ' ಎಂದು ಕರೆಯುತ್ತಾರೆ. ಹಿಂದೆ ಇಲ್ಲಿ ವಿಲಾಸಿ ಮಂದಿರಗಳಿದ್ದು, ಅವುಗಳಲ್ಲಿ ದೇವದಾಸಿಯರು ವಾಸಿಸುತ್ತಿದ್ದರೆಂದು ಪ್ರತೀತಿ ಇತ್ತು. ಆದರೆ ಈಗ ಅಲ್ಲಿ ಅಂತಹ ಯಾವ ಮಂದಿರಗಳು ಇದ್ದ ಕುರುಹು ಕಾಣ ಸಿಗುವುದಿಲ್ಲ. ಈ ಕೇರಿಯ ಉದ್ದವು ಸುಮಾರು ೨೦೦ ಮೀ. ಉದ್ದವಾಗಿದ್ದು ಕೇರಿಯ ಕೊನೆಯಲ್ಲಿ ಪ್ರವೇಶ ದ್ವಾರದ ಕುರುಹುಗಳನ್ನು ಕಾಣಬಹುದು. ಈ ಕೇರಿಯ ಪ್ರಾರಂಭದಲ್ಲಿ ಒಂದು ಕಟ್ಟೆಯು ಕಂಡುಬರುತ್ತದೆ. ಇದನ್ನು 'ಚಿನಿವಾರ' ಕಟ್ಟೆ ಎಂದು ಕರೆಯುತ್ತಾರೆ.

**೩. ಬಸದಿ ಕೇರಿ :** ಮಂಡಿಕೇರಿ ರಸ್ತೆಯಿಂದ ಬಲಕ್ಕೆ ತಿರುಗಿ ನೇರವಾಗಿ ಪೂರ್ವಾಭಿಮುಖವಾಗಿ ಸಾಗುವ ರಸ್ತೆಯೇ ಬಸದಿಕೇರಿ. ಈ ಕೇರಿಯ ಇಕ್ಕೆಲಗಳಲ್ಲಿಯೂ ಹಳೆಯಕಾಲದ ಮನೆಗಳಿವೆ. ಈ ಕೇರಿಯ ಉದ್ದ ಸುಮಾರು ೩೦೦ಮೀಟರ್ ಇರಬಹುದು. ಈ ಪ್ರದೇಶದಲ್ಲಿ ಈಗಲೂ ಕುಶಲ ಕರ್ಮಿಗಳಾದ ಗುಡಿಗಾರರು, ಕಂಚುಗಾರರು, ಚಿನಿವಾರರು, ಮತ್ತು ನೇಕಾರ, ಮುಂತಾದವರ ಮನೆಗಳಿವೆ.

**೪. ರಾವುತ ಕೇರಿ :** ಈ ಕೇರಿಯು ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಎದುರಿಂದ ದಕ್ಷಿಣಕ್ಕೆ ಸುಮಾರು ೨೦೦ಮೀ, ಅಂತರವನ್ನು ಹೊಂದಿದೆ. ಓಂದೆ ಇಲ್ಲಿ ಸೈನ್ಯದ ಕುದುರೆ ಸವಾರರು ಇರುತ್ತಿದ್ದರಂತೆ. ಕುದುರೆ ಕಟ್ಟುವ ಕಲ್ಲು ಹಾಗೂ ಕುದುರೆಗಳು ನೀರು ಕುಡಿಯಲು ನಿರ್ಮಿಸಿದ ಶಿಲಾ ತೊಟ್ಟಿಗಳು ಇಲ್ಲಿವೆ. ಗೌಡ ಸಾರಸ್ವತರ ದೇವಸ್ಥಾನಗಳಲ್ಲಿ ಒಂದಾದ 'ಶಾಂತೇರಿ ಕಾಮಾಕ್ಷಿ' ದೇವಸ್ಥಾನವು ಈ ಬೀದಿಯಲ್ಲಿದೆ. ಅಲ್ಲಿ ಸಮೀಪದಲ್ಲಿಯೇ ತೋಟವೊಂದರಲ್ಲಿ ಅತೀ ಪ್ರಾಚೀನವಾದ 'ತುಳುವೇಶ್ವರ' ದೇವಾಲಯದ ಅವಶೇಷವಿದೆ. ಪ್ರಾಚೀನವಾದ ದೊಡ್ಡ ಗಾತ್ರದ ಶಿವಲಿಂಗವೊಂದಿದ್ದು, ಎದುರಿನಲ್ಲಿಯೇ ಸುಂದರವಾದ ನಂದಿಯ ವಿಗ್ರಹವಿದೆ. ಶಿವಲಿಂಗವನ್ನು ಬೃಹದಾಕಾರದ ಗೋಳಿಯ ಮರವು ಆವರಿಸಿದೆ. ಹಿಂದೆ ದೇವದಾಸಿ ಮನೆತನದವರು ವಾಸವಾಗಿದ್ದ ಕೆಲವು ಶಿಥಿಲ ಕಟ್ಟಡಗಳ ಅವಶೇಷಗಳನ್ನು ಇಲ್ಲಿ ಕಾಣಬಹುದು. ಇದೇ ಬೀದಿಯಲ್ಲಿ ದಕ್ಷಿಣಾಭಿಮುಖವಾಗಿ ಮುಂದುವರಿದರೆ

ರಸ್ತೆಯ ಬಲಭಾಗದಲ್ಲಿ 'ಬಸ್ರೂರು ಬಳಕೆದಾರರ ವೇದಿಕೆ' ಯ ಕಛೇರಿ ಇದೆ. ಅಲ್ಲಿಯೇ ಎಡಭಾಗದಲ್ಲಿ ಪುರಾತನವಾದ ಶ್ರೀ ದೇವಿ ಅಮ್ಮನವರ ಗುಡಿ ಇದೆ. ಇಲ್ಲಿ ನಾಥ ಸಂಪ್ರದಾಯದವರು ಅರ್ಚಕರಾಗಿದ್ದಾರೆ. ಈ ಕೇರಿಯ ಕೊನೆಯಲ್ಲಿ 'ಆಂಜನೇಯ' ಗುಡಿ ಮತ್ತು ಶ್ರೀ ತಿರುಮಲ ವೆಂಕಟರಮಣ ಗುಡಿಗಳು ಎದುರುಗುತ್ತವೆ. ವೆಂಕಟರಮಣ ದೇವಸ್ಥಾನದ ಎದುರಿನ ಕಂಚಿನ ದೀಪ ಸ್ತಂಭದಲ್ಲಿರುವ 'ಗೋಪಿಕಾ ವಸ್ತ್ರಾಪಹರಣ'ದ ದೃಶ್ಯವು ತುಂಬಾ ಮನಮೋಹಕವಾಗಿವೆ.

೫. **ಗುಡಿಗಾರ ಕೇರಿ :** ಶ್ರೀ ವೆಂಕಟರಮಣ ದೇವಸ್ಥಾನದ ಬಲಗಡೆಯಿಂದ ಪೂರ್ವಾಭಿಮುಖವಾಗಿ ಸಾಗುವ ಕೇರಿಯೇ ಗುಡಿಗಾರಕೇರಿ. ಹಿಂದೆ ಇಲ್ಲಿ ಗುಡಿಗಾರರು ಇದ್ದಿರಬಹುದು. ಆದರೆ ಈಗ ಗುಡಿಗಾರರ ಒಂದು ಕುಟುಂಬವೂ ವಾಸವಾಗಿಲ್ಲ. ಇದರ ಅಂತರ ಸುಮಾರು ೨೦೦ಮೀ, ಇರಬಹುದು. ಈ ಕೇರಿಯ ಮಧ್ಯದಲ್ಲೊಂದು ಕಟ್ಟೆಯು ಕಾಣಸಿಗುತ್ತದೆ. ಅದಕ್ಕೆ 'ಗುಡಿಗಾರ್ರ ಕಟ್ಟೆ' ಎಂದು ಹೆಸರು. ಇಲ್ಲಿ ಒಂದು ಕೈಮಗ್ಗದ ಬಟ್ಟೆ ತಯಾರಿಕಾ ಕೇಂದ್ರವು ಕಾರ್ಯ ನಿರ್ವಹಿಸುತ್ತಿದೆ.

೬. **ಮೇಲ್ ಕೇರಿ :** ಇದಕ್ಕೆ 'ಸಾಲೇರ ಕೇರಿ' ಎಂದು ಕೂಡಾ ಹೇಳುತ್ತಾರೆ. ಇದರ ಉದ್ದ ಸುಮಾರು ೨೫೦ಮೀ, ಇರಬಹುದು. ಈ ಕೇರಿಯ ಮಧ್ಯದಲ್ಲಿ ಈಗಿನ ಬಸ್ ಸ್ಟ್ಯಾಂಡ್ ಇದ್ದು, ಮುಂದೆ ಶಾರದ ಕಾಲೇಜಿನ ತನಕ ವಿಸ್ತಾರಗೊಂಡಿದೆ.

೭. **ಮೂಡುಕೇರಿ :** ಈ ಕೇರಿಯು ಊರಿನ ಮೂಡು (ಪೂರ್ವ) ದಿಕ್ಕಿನಲ್ಲಿದೆ. ಈ ಕೇರಿಯು ದಕ್ಷಿಣದಲ್ಲಿ 'ಕಾಶೀ ಮಠ'ದಿಂದ ಉತ್ತರಕ್ಕೆ 'ಕೋಟಿ ಚೆನ್ನಯ ಗರಡಿ'ಯ ತನಕವೂ ಸಾಗಿದೆ. ಈ ಕೇರಿಯಲ್ಲಿ 'ಶ್ರೀ ಭುವನೇಂದ್ರ ಬಾಲಕಾಶ್ರಮ' ಸಮೀಪದಲ್ಲಿಯೇ ಕಾಶೀ ಮಠದ 'ಶ್ರೀ ವೆಂಕಟರಮಣ' ದೇವಾಲಯ ಅದರ ವಿರುದ್ಧ ದಿಕ್ಕಿನಲ್ಲಿ 'ಶ್ರೀ ರಾಮಚಂದ್ರ' ದೇವಾಲಯ ಇದರ ಬಲಗಡೆ 'ಶ್ರೀ ತಿರುಮಲ ವೆಂಕಟರಮಣ' ದೇವಸ್ಥಾನವಿದೆ. ಕಾಶೀ ಮಠದ ಎಡಭಾಗದಲ್ಲಿ ಅತೀ ಪುರಾತನವಾದ 'ಆದಿನಾಥೇಶ್ವರ' ದೇವಸ್ಥಾನವಿದೆ. ಈ ದೇವಸ್ಥಾನಕ್ಕೆ 'ಅಗಸ್ತ್ಯೇಶ್ವರ' ಎಂಬ ಹೆಸರು ಕೂಡಾ ಇದೆ. ಈ ಕೇರಿಯ ಕೆರೆ ಕಟ್ಟೆಯಲ್ಲಿ ನೇಪಾಳದ ಅಡಿಗರ ಮನೆ ಹಾಗೂ 'ಪ್ರಜಾಪಿತ ಬ್ರಹ್ಮಕುಮಾರಿಯ ಈಶ್ವರೀಯ ವಿಶ್ವವಿದ್ಯಾಲಯ'ದ ರಾಜಯೋಗ ಶಿಕ್ಷಣ ಕೇಂದ್ರವಿದೆ.

**ಏಳು ಕೆರೆಗಳು**

ಬಸ್ರೂರಿನಲ್ಲಿ ಕೆರೆಗಳ ಸಂಖ್ಯೆ ಅಪಾರವಾಗಿದೆ. ಈ ಎಲ್ಲ ಕೆರೆಗಳು ವಿಶಾಲವಾಗಿದ್ದು ನಗರ ಮಧ್ಯದಲ್ಲಿವೆ. ಈ ಕೆರೆಗಳು ನೀರಾವರಿಯೊಂದಿಗೆ ಜನರ ದೈನಂದಿನ ಉಪಯೋಗಕ್ಕಾಗಿ ನಿರ್ಮಾಣಗೊಂಡಿರಬಹುದು. ಕೆರೆಗಳನ್ನು ಕೆಂಪು ಬಣ್ಣದ ಇಟ್ಟಿಗೆ ಕಲ್ಲುಗಳಿಂದ ನಿರ್ಮಿಸಿದ್ದು, ಶಿಲೆಯ ಹಾಸುಗಲ್ಲಿನ ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ.

ಇವು ಅತೀ ಪ್ರಾಚೀನವಾದ ಕೆರೆಗಳೆಂದು ಗುರುತಿಸಬಹುದು. ಅವು 'ಚಂದ್ರ ಪುಷ್ಕರಣಿ' ಎಂದು ಕರೆಯುವ 'ದೇವರ ಕೆರೆ', ' ಅಗಸ್ತ್ಯ ತೀರ್ಥ'ವೆಂದು ಕರೆಯುವ 'ಮೂಡುಕೇರಿ'ಯ ಕೆರೆ 'ಹಲರ ಕೆರೆ', 'ಪಳ್ಳಿ ಕೆರೆ', 'ಮಠದ ಕೆರೆ', 'ಗದ್ದೆ ಮನೆ ಕೆರೆ', ಮತ್ತು 'ಚಿಲುಮೆ ಕೆರೆ', ಇಂದು ಈ ಕೆರೆಗಳೆಲ್ಲ ದುರಸ್ಥಿಯಾಗದೆ ಹೂಳು ತುಂಬಿಕೊಂಡಿದೆ.

ಬಸ್ರೂರಿನಲ್ಲಿ ಎಲ್ಲ ಧರ್ಮಗಳ ಎಲ್ಲ ಜಾತಿಗಳವರೂ ಇದ್ದಾರೆ. ಹಿಂದುಗಳು ಅಧಿಕ ಸಂಖ್ಯೆಯಲ್ಲಿದ್ದು, ಬೌದ್ಧ ಧರ್ಮದ ಶಾಖೆಯಾದ ನಾಥ ಪಂಥದವರು, ಮುಸ್ಲಿಮರು, ಕ್ರೈಸ್ತರು ಮುಂತಾದ ಜಾತಿಗಳವರೆಲ್ಲ ಅನ್ಯೋನ್ಯವಾಗಿದ್ದಾರೆ. ಇಲ್ಲಿ 'ಸರ್ವಧರ್ಮ ಸಮನ್ವಯತೆ'ಯು ಕಂಡುಬರುತ್ತದೆ. ಹಿಂದೆ ಇಲ್ಲಿ ವೀರಶೈವರೂ ಇದ್ದರಂತೆ. ಇಲ್ಲಿನ ಕನ್ನಡಿಗರೊಂದಿಗೆ ತಮಿಳ್ , ಮಲೆಯಾಳಿ, ತುಳು, ಕೊಂಕಣಿ, ಭಾಷಿಗರೆಲ್ಲಾ ಉತ್ತಮವಾದ ಸ್ನೇಹ ಸಂಬಂಧ ಹೊಂದಿದ್ದಾರೆ. ಈ ಎಲ್ಲ ಭೌಗೋಳಿಕ ಹಿನ್ನೆಲೆಯಲ್ಲಿ ಬಸ್ರೂರು ತುಂಬಾ ವೈಶಿಷ್ಟ್ಯ ಪೂರ್ಣವಾಗಿದೆ.

## ೨.೨. ಚಾರಿತ್ರಿಕ ಹಿನ್ನೆಲೆ

ಐತಿಹಾಸಿಕವಾಗಿ ಬಸ್ರೂರು ತುಂಬ ಮಹತ್ವ ಪಡೆದ ಪಟ್ಟಣವಾಗಿತ್ತು. ನಗರದ ಪ್ರಾಚ್ಯ ಅವಶೇಷಗಳನ್ನು, ನಗರ ರಚನೆಯ ವೈಶಿಷ್ಟ್ಯಗಳನ್ನು ಗಮನಿಸಿದರೆ ಇತಿಹಾಸದ ಕಾಲದಲ್ಲಿ ಬಸ್ರೂರಿನ ಖ್ಯಾತಿ ಮುಗಿಲು ಮುಟ್ಟಿರಬಹುದು. ಇಲ್ಲಿಗೆ ಸಂಬಂಧಿಸಿದ ಶಾಸನಗಳು, ಪುರಾಣ, ಇತಿಹಾಸಗಳು, ಶಿಲ್ಪಕಲೆ, ಮತ್ತು ಮರದ ಕೆತ್ತನೆಗಳು ಅಂದಿನ ಭವ್ಯತೆಯನ್ನು ಇಂದಿಗೂ ಸಾರಿ ಹೇಳುತ್ತವೆ. ಈ ಊರಿನ ಸ್ಥಳ ನಾಮದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಸ್ಥಳ ಪುರಾಣದಿಗಳಲ್ಲಿ ಬಸರೂರನ್ನು 'ವಸುಪುರ' ಎಂದು ಉಲ್ಲೇಖಿಸಲಾಗಿದೆ. ಛೇದಿದೇಶದಿಂದ ರಾಜ್ಯ ಕಳೆದುಕೊಂಡು ಪರುಶುರಾಮ ಕ್ಷೇತ್ರಕ್ಕೆ ಬಂದ ವಸುಮಹಾರಾಜನು ಅಲ್ಲಿ ರಾಜ್ಯ ಸಂಸ್ಥಾಪನೆ ಮಾಡಿದ್ದುದರಿಂದ ಅದಕ್ಕೆ 'ವಸುಪುರ'ವೆಂಬ ಹೆಸರು ಬಂದಿತೆಂದು ಮುಂದೆ ಇದೇ ಹೆಸರು ಬಸ್ರೂರು ಎಂದಾಯಿತು ಎಂದು ಪ್ರತೀತಿ ಇದೆ. ಆದರೆ ಇಲ್ಲಿ ದೊರಕಿರುವ ಯಾವ ಶಾಸನಗಳಲ್ಲಿಯೂ 'ವಸುಪುರ' ವೆಂಬ ಹೆಸರಿನ ಬಗೆಗೆ ಆಧಾರಗಳಿಲ್ಲ. ವಸುಪುರ ಎಂಬ ಹೆಸರು ಮೊತ್ತಮೊದಲು ಗೋಚರವಾಗುವುದು ಕ್ರಿ.ಶ. ೧೭೭೫ರ ಲಿಂಗಣ್ಣ ಕವಿಯ ಕೆಳದಿ ನೃಪ ವಿಜಯದಲ್ಲಿ ('ಕೇಡಿಲ್ಲದ ವಸುಪುರ ವನಾನ್ರಪಂ ಸಾಧಿಸಿದಂ' ಆಶ್ವಾಸ ೫ ಪದ್ಯ ೪೮) ದೇವದಾಸಿಯರ ನರ್ತನದ ಹಾಡುಗಳು 'ವಸುಪುರದೊಳು ನೆಲೆಸಿದ ಮಹಾಲಿಂಗಂಗೆ'......ಎಂದೂ, ದೊರೆತಿರುವುದರಿಂದ ಕಾವ್ಯಪುರಾಣ, ಹಾಡುಗಳಲ್ಲಿ ಮಾತ್ರ ವಸುಪುರ ಎಂಬ ಹೆಸರು ಬಂದಿರಬೇಕೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುತ್ತಾರೆ.

ಡಾ. ಪಿ.ಎನ್ .ನರಸಿಂಹ ಮೂರ್ತಿಯವರು ಇಲ್ಲಿನ ನೆಲವು ನೀರಿನ ಒಸರಿನಿಂದ ಕೂಡಿದ್ದರಿಂದ 'ಬಸರೂರು' ಎಂದು ಕರೆಯಲ್ಪಟ್ಟು, ನಂತರ ಈ ಹೆಸರು ಬಸ್ರೂರು ಎಂದಾಯಿತು ಎಂದು ಅಭಿಪ್ರಾಯ ವ್ಯಕ್ತ ಪಡಿಸುತ್ತಾರೆ.

(ಡಾ. ಪಿ.ಎನ್.ಎನ್. ಮೂರ್ತಿ, ೧೯೮೪. ಪುಟ - ೨೮). ಈ ಊರು ವಾರಾಹಿ ನದಿಯ ಸಮೀಪವಿರುವುದರಿಂದ ಮತ್ತು ಇದು ಕರಾವಳಿಯ ಬಯಲು ಪ್ರದೇಶವಾದುದರಿಂದ ಸ್ವಾಭಾವಿಕವಾಗಿಯೇ 'ಬಿಸರು'ಗಳು ಕಂಡುಬರುತ್ತವೆ. ಈ ಹೆಸರು ಸಸ್ಯವಾಚಕವಿರಬಹುದೆಂದು ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ. (ಡಾ. ಕೆಮ್ತೂರು ರಘುಪತಿ ಭಟ್ಟ. ೧೯೭೭ ಪುಟ - ೯೧). ತುಳುನಾಡಿನಾದ್ಯಂತ 'ಬಸರಿ' ಎನ್ನುವ ಒಂದು ಜಾತಿಯ ಸಸ್ಯವಿದೆ. ಬಸರಿಗಿಡದ ಹಿನ್ನೆಲೆಯಲ್ಲಿ ಈ ಹೆಸರು ಬಂದಿರಬಹುದು. ಕ್ರಿಸ್ತಶಕದ ಆದಿಯಿಂದಲೇ ಬಸ್ರೂರು ಪಾಶ್ಚತ್ಯರಿಗೆ ವ್ಯಾಪಾರ ಕೇಂದ್ರವಾಗಿ ಪರಿಚಯವಾಗಿತ್ತೆಂದು ಸಂಶೋಧಕರು ಅಭಿಪ್ರಾಯಪಡುತ್ತಾರೆ. 'ಸೀವೆಲನ Artiguoriar remains of the pricidercy of Medras (Vol. I) ಎಂಬ ಗ್ರಂಥದಲ್ಲಿ ಬಸರೂರನ್ನು 'ಬಾರ್ಸೆಲೋರ್' ಎಂದೂ ಈ ಬಾರ್ಸೆಲೋರ್ ಎಂಬುದು 'ಟೋಲೆಮಿ' ಗ್ರಂಥದ 'ಬರೇಸ್' ಆಗಿರಬೇಕೆಂದೂ ಕ್ರಿ.ಶ.೨ನೇ ಶತಮಾನದ ಸುಮಾರಿಗೆ ಇದು ವಿಶೇಷ ತರದ ವ್ಯಾವಹಾರಿಕ ಚಟುವಟಿಕೆಯನ್ನು ಅರೇಬಿಯಾ ಮತ್ತು ಐಗುಪ್ತ ದೇಶಗಳೊಡನೆ ನಡೆಸುತ್ತಿತ್ತೆಂದು ಬರೆದಿದೆ. ನೋಡಿ (ಡಾ. ಪಿ.ಗುರುರಾಜ ಭಟ್ಟ, ೧೯೯೭, ಪುಟ-೩)

ಬಸ್ರೂರು ೧-೨ನೇ ಶತಮಾನದಿಂದಲೇ ವಿದೇಶಿ ಪ್ರವಾಸಿಗರ ಗಮನ ಸೆಳೆದ ಪಟ್ಟಣವಾಗಿತ್ತು. ಅರ್ತೆ ಬಾರ್ಬೊಸಾಡೊಮಿಂಗೋ ಪಾಯೆಸ್ , ಸೀಜರ್ ಫ್ರೆಡರಿಕ್ ಡಾರಿದು ಅರ್ತು ಮೆನೇಜಸ್ ಮುಂತಾದ ವಿದೇಶಿ ಪ್ರವಾಸಿಗರು ಕ್ರಿ.ಶ. ೧೫೦೦ರ ಸುಮಾರಿಗೆ ಬಸ್ರೂರಿಗೆ ಭೇಟಿ ನೀಡಿ ಇಲ್ಲಿನ ವೈಭವ ಜೀವನದ ಬಗ್ಗೆ ಬರೆದಿದ್ದಾರೆ. ಈ ನೆಲವನ್ನು ಅಲೂಪ ದೊರೆಗಳು, ಶಾಂತರ ಮನೆತನದವರು, ವಿಜಯನಗರ, ಇಕ್ಕೇರಿಯ ಅರಸರು, ಪೋರ್ಚುಗೀಸರು, ಬ್ರಿಟೀಷರು ಮೊದಲಾದವರು ಆಳಿ ತಮ್ಮ ಮತ ಧರ್ಮಗಳ ಮತ್ತು ತಮ್ಮ ಆಳ್ವಿಕೆಯ ಕುರುಹುಗಳನ್ನು ಬಿಟ್ಟು ಹೋಗಿದ್ದಾರೆ.[೧] ಇದು ಕ್ರಿ.ಶ.ಕದ ಮೊದಲಿನಿಂದಲೂ ಪ್ರಸಿದ್ಧ ವ್ಯಾಪಾರೀ ಕೇಂದ್ರವಾಗಿತ್ತು. ನಗರದ ಸಮೀಪದಲ್ಲೇ ಹರಿಯುತ್ತಿರುವ ವಾರಾಹಿ ನದಿಯಲ್ಲಿ ಪಶ್ಚಿಮ ದೇಶಗಳ ಹಾಯಿ ಹಡಗುಗಳು ಬಸ್ರೂರು ಬಂದರಿನಲ್ಲಿ ತಂಗುತ್ತಿದ್ದವು. ಇಲ್ಲಿಂದ ಕಾಳುಮೆಣಸು ಅಕ್ಕಿ ತೆಂಗಿನಕಾಯಿಗಳು ಪರ್ಷಿಯಾದವರೆಗೂ ಹೋಗುತ್ತಿದ್ದವು. (ಮಹಮ್ಮದ್ ಹುಸೇನ್ ನೈನಾರ, ೧೯೪೨, ಪುಟ - ೨೮,೨೯)

ಬಸ್ರೂರಿನಲ್ಲಿ ಬೃಹತ್ ಶಿಲಾಯುಗದ ಅವಶೇಷಗಳನ್ನು ಸಂಶೋಧಕರು ಪತ್ತೆ ಮಾಡಿದ್ದಾರೆ. ಇಲ್ಲಿ ಬಂಗ್ಲೆ ಗುಡ್ಡೆಯ ಸಮೀಪ ಬಂಡೆಕಲ್ಲುಗಳ ಮೇಲೆ ಚನ್ನೆ ಮಣೆಯಂತಹ ರಚನೆ ಮತ್ತು ಕುದುರೆಯ ಮೇಲೆ ಬಲಗೈಯಲ್ಲಿ ಆಯುಧ ಹಿಡಿದು ನಿಂತಿರುವ ವ್ಯಕ್ತಿಯ ಚಿತ್ರ. ಸೂರ್ಯ ಹಾಗೂ ತ್ರಿಶೂಲವನ್ನು ಹೋಲುವ ಮಧ್ಯದಲ್ಲಿ ಕಣ್ಣುಗಳಂತಿರುವ ಆಳವಾದ ಚುಕ್ಕೆಗಳಿರುವ ರಚನೆ. ಇವು ಪ್ರಾಗಿತಿಹಾಸ ಕಾಲದ ಅವಶೇಷಗಳೆಂದು ಸಂಶೋಧಕರು ಅಭಿಪ್ರಾಯ ಪಡುತ್ತಾರೆ. (ಡಾ. ಬಿ.ವಸಂತ ಸೆಟ್ಟಿ, ೧೯೯೧, ಪುಟ- ೭೧೪)

ಬಸ್ರೂರು ಐತಿಹಾಸಿಕ ಪ್ರಸಿದ್ಧಿ ಪಡೆದಿದೆಯೆಂದು ಇಲ್ಲಿ ಕಾಣಸಿಗುವ ಶಾಸನಗಳಿಂದ ತಿಳಿದುಕೊಳ್ಳಬಹುದು. ಇಲ್ಲಿಗೆ ಸಂಬಂಧಿಸಿದಂತೆ ಆಳುವ ಅರಸರ ಉಲ್ಲೇಖವನ್ನು ಪ್ರಸ್ತಾಪಿಸುವ ಪ್ರಥಮ ಶಾಸನ (ಕ್ರಿ.ಶ. ೧೧೫೪ರ ಆಳುಪರಸ ಕವಿಯಾಳುಪೇಂದ್ರನ ಶಾಸನ. (S.I.I. Vol- IX, Part-1 No. ೩೯೩). ಇದರಲ್ಲಿ 'ಹೊಸಪಟ್ಟಣ ಬಸುರೆ ಪುರ'ವೆಂದು ಸೂಚಿಸಲಾಗಿದೆ. ಆಳುಪ ಅರಸ ಕವಿಯಾಳುಪೇಂದ್ರ ಆಳುತ್ತಿದ್ದಾಗ ಮೌನಯೋಗಿಯು ನಖರೇಶ್ವರ ದೇವರ ನೈವೇಧ್ಯದ ವೆಚ್ಚಕ್ಕಾಗಿ ಚಿನ್ನದ ನಾಣ್ಯಗಳನ್ನು ದಾನ ಮಾಡಿದ್ದನ್ನು ತಿಳಿಸುವ ಈ ಶಾಸನವು ಬಸ್ರೂರು ಆ ಸಮಯಕ್ಕಾಗಲೇ ಹೊಸರೂಪ ಪಡೆದದ್ದನ್ನು ಸೂಚಿಸುತ್ತದೆ. ನಂತರ ಆಳಿದ ಆಳುಪ ಅರಸು ಕುಲಶೇಖರನ ೧೧೭೬ರ ಶಾಸನದಲ್ಲಿ (S.I.I. Vol- IX, Part-1 No. ೩೯೪). 'ಬಸರೂರ ಪಟ್ಟಣ' ಎಂದು ಉಲ್ಲೇಖಿಸಲಾಗಿದೆ. ಇದರಲ್ಲಿ ರಾಜಪ್ಪ ಸೆಟ್ಟಿಯ ಮಗಳು ಚಂಡಬ್ಬೆ ನಖರೇಶ್ವರ ದೇವರಿಗೆ ನೀಡಿದ ದತ್ತಿ ಇಲ್ಲಿ ದಾಖಲಿಸಲ್ಪಟ್ಟಿದೆ. ಈ ಶಾಸನವು ಇಲ್ಲಿನ ಶ್ರೀ ಮಹಾಲಿಂಗೇಶ್ವರ ದೇವಾಲಯದಲ್ಲಿದೆ.

೧೨ನೇ ಶತಮಾನದ ಮೊದಲೇ ಬಸ್ರೂರು ಮಹತ್ವದ ವ್ಯಾಪಾರಿ ಕೇಂದ್ರವಾಗಿತ್ತು. ಇಲ್ಲಿಯ ಶಾಸನಗಳು ಮೂಡಕೇರಿ ಮತ್ತು ಪಡುವಕೇರಿಯ ವರ್ತಕರ ಚಟುವಟಿಕೆಗಳನ್ನು ಸೂಚಿಸುತ್ತವೆ. ಪ್ರತಿ ಕೇರಿಗೂ ಆಡಳಿತದಲ್ಲಿ ಭಾಗಿಯಾಗುವ ಪ್ರತಿನಿಧಿಗಳಿದ್ದರು. ಇವರಲ್ಲಿ ಹಲರು, ಸೆಟ್ಟಿಕಾರ, ನಖರ, ಹಂಜಮಾನ,[೨] ಮುಂತಾದ ವ್ಯಾಪಾರಿ ಸಂಘಗಳು ತುಂಬಾ ಪ್ರಭಾವಿಗಳಾಗಿದ್ದು ಪೌರಾಡಳಿತದಲ್ಲಿ ಅವರು ಪ್ರಮುಖ ಪಾತ್ರ ವಹಿಸುತ್ತಿದ್ದರು. 'ನಖರ' ವ್ಯಾಪಾರಿಗಳ ಸಂಘ 'ನಖರೇಶ್ವರ' ದೇವಾಲಯ ನಿರ್ಮಿಸುವುದರೊಂದಿಗೆ ಧಾರ್ಮಿಕ ಕ್ಷೇತ್ರದಲ್ಲೂ ಹಾಗೂ ಆಡಳಿತ ಕ್ಷೇತ್ರದಲ್ಲೂ ತನ್ನ ಪ್ರಭಾವ ಹೊಂದಿತ್ತು.

ಬಸ್ರೂರು ವಿಜಯನಗರದ ಅರಸರ ಕಾಲದಲ್ಲಿ ಸರ್ವತೋಮುಖ ಅಭಿವೃದ್ಧಿಯನ್ನು ಕಂಡಿತು. ವಿಜಯನಗರದ ಸಾಮ್ರಾಟರಿಂದ ನಿಯಮಿಸಲ್ಪಟ್ಟಿದ್ದ ಬಾರಕೂರು ರಾಜ್ಯದ ರಾಜಪಾಲರುಗಳ ಆಡಳಿತಕ್ಕೆ ಬಸ್ರೂರು ಒಳಪಟ್ಟಿತ್ತು. ವಿಜಯನಗರದ ದೊರೆ 'ಇಮ್ಮಡಿ ಹರಿಹರ'ನ ಕಾಲದಿಂದ ಇಲ್ಲಿ ಸ್ಥಳೀಯ ಆಡಳಿತವು ಹೆಚ್ಚಿನ ಮಹತ್ವ ಪಡೆದಿದ್ದು ಈ ಕಾಲದ ಶಾಸನಗಳಿಂದ ತಿಳಿದುಬರುತ್ತದೆ.

ಬಸ್ರೂರು ಮಹಾಲಿಂಗೇಶ್ವರ ದೇವಾಲಯದಲ್ಲಿರುವ ಕ್ರಿ.ಶ. ೧೪೦೦ ಅಗೋಸ್ತು ೧೧ರಂದು ಬರೆಸಿದ ಶಾಸನವು ಬಸ್ರೂರು ಬಾರಕೂರಿನ ರಾಜ್ಯಪಾಲ ಬಸವಣ ಒಡೆಯನ ಆಡಳಿತದಲ್ಲಿತ್ತೆಂಬುದನ್ನು ಸೂಚಿಸುತ್ತದೆ. (S.I.I. Vol - IX, Part-I, No. ೪೨೩). ಅಲ್ಲದೆ ಬಸ್ರೂರು ಮತ್ತು ಶೃಂಗೇರಿ ಮಠದ ಸಂಬಂಧವನ್ನು ಹೊರಗೆಡುಹುತ್ತದೆ. ಆಗ ಸೆಟ್ಟಿಕಾರರ ವ್ಯಾಪಾರಿ ಸಂಘವು ಪ್ರಬಲವಾಗಿತ್ತು. ಅದರ ಸದಸ್ಯ ಮಾದಣ್ಣ ಸೆಟ್ಟಿಯು ಶೃಂಗೇರಿ ಮಠದ ವಿದ್ವಾನ್ ಚಕ್ರವರ್ತಿ ಉಪಾಧ್ಯಾಯರ ಮಗ ಸಿಂಗಣ್ಣ ಅಯ್ಯನಿಗೆ ನೀಡಿದ ದತ್ತಿಯ ವಿವರಗಳನ್ನು ಶಾಸನ ಒಳಗೊಂಡಿದೆ. ಸ್ಥಳೀಯ ಆಡಳಿತದಲ್ಲಿ ಪ್ರತಿನಿಧಿಗಳಾಗಿ ಭಾಗವಹಿಸುತ್ತಿದ್ದ ಹಲರ ಮಹತ್ವವು ಈ ಶಾಸನದಿಂದ ತಿಳಿಯುತ್ತದೆ.

ಬಸ್ರೂರಿನ ಕ್ರಿ.ಶ. ೧೪೦೧ರ ಇನ್ನೊಂದು ಶಾಸನವು ಬಾರಕೂರಿನ ರಾಜ್ಯಪಾಲ ಬಸವಣ್ಣ ಒಡೆಯನ ಆಳ್ವಿಕೆಯನ್ನು ಸೂಚಿಸುತ್ತದೆ. (S.I.I. Vol - IX, Part-II, No. ೪೨೩) ನಂತರದ ೧೪೫೫ರಲ್ಲಿ ವಿಜಯನಗರದ ಸಾಮ್ರಾಟ ಮಲ್ಲಿಕಾರ್ಜುನನ ಆಳ್ವಿಕೆಯಲ್ಲಿ ಪಂಡರಿದೇವನು ಈ ಪ್ರದೇಶದ್ದು ಆಡಳಿತ ನಡೆಸುತ್ತಿದ್ದುದು ಮಹಾಲಿಂಗೇಶ್ವರ ದೇವಾಲಯದ ಶಾಸನವೊಂದರಿಂದ ತಿಳಿದುಬರುತ್ತದೆ. (S.I.I. Vol - IX, Part-II, No. ೪೫೭) ಆಗ ಮೂಡುಕೇರಿ ಮತ್ತು ಪಡುವ ಕೇರಿಗಳ ಸೆಟ್ಟಿಗಳ ನಡುವೆ ಇದ್ದ ವಿವಾದವೊಂದನ್ನು ಸೌಹಾರ್ದತೆಯಿಂದ ಬಗೆಹರಿಸಿದುದನ್ನು ತಿಳಿಸುತ್ತದೆ. ಕ್ರಿ.ಶ. ೧೫೫೪ರ ಅಕ್ಟೋಬರ್ ೨೭ರಂದು ಬರೆಸಿದ ಬಸ್ರೂರು ಸಣ್ಣ ಕೆರೆಕಟ್ಟೆಯ ಶಾಸನವು (S.I.I. Vol - IX, Part-II, No. ೬೫೫) ವಿಜಯನಗರದ ದೊರೆ ಸದಾಶಿವರಾಯನು ಬಾರಕೂರು ರಾಜ್ಯವನ್ನು ಕೆಳದಿ ಸದಾಶಿವ ನಾಯಕನಿಗೆ ವಹಿಸಿದ್ದಾಗಿ ತಿಳಿಸುತ್ತದೆ. ಇದರಿಂದ ಬಸ್ರೂರು ಕೆಳದಿ ನಾಯಕರ ಆಡಳಿತಕ್ಕೆ ಒಳಪಟ್ಟಿತ್ತು. ಇಲ್ಲಿನ ರಾಜ್ಯಪಾಲರ ನೇಮಕ ಮತ್ತು ಆಡಳಿತದ ಜವಾಬ್ದಾರಿ ಕೆಳದಿ ನಾಯಕರದಾಗಿತ್ತು. ಕ್ರಿ.ಶ. ೧೬೦೬ರ ನಂತರ ಕೆಳದಿ ವೆಂಕಟಪ್ಪ ನಾಯಕನು ಕೆಳದಿ ನಾಯಕರ ಪ್ರತ್ಯಕ್ಷ ಆಡಳಿತವನ್ನು ಇಲ್ಲಿ ಸ್ಥಾಪಿಸಿದನು. ಇಲ್ಲಿಯ 'ಮಹಾಲಿಂಗ' ದೇವರ ಪೂಜೆಗೆ ಲೋಪವಾಗದಂತೆ ನಿಯಮಗಳನ್ನು ಸ್ಥಾಪಿಸಿದನು. (ಲಿಂಗಣ್ಣ ಕವಿ, ೧೯೯೨, ಮೈಸೂರು, ಪುಟ ೯೭೦)

ಕೆಳದಿ ವೆಂಕಟಪ್ಪ ನಾಯಕನ ನಂತರ ಪಟ್ಟಕ್ಕೆ ಬಂದ ಇವನ ಮೊಮ್ಮಗ ವೀರಭದ್ರನು ಬಸ್ರೂರಿನ ಮೇಲಿನ ಅಧಿಕಾರವನ್ನು ಮುಂದುವರೆಸಿಕೊಂಡು ಬಂದನು. ಮುಂದಿನ ಕೆಳದಿ ನಾಯಕರ ಕಾಲದಲ್ಲಿ ಬಸ್ರೂರು, ಡಚ್ಚ್ , ಮತ್ತು ಪೋರ್ಚುಗೀಸರ ವ್ಯಾಪಾರ ಸ್ಪರ್ಧೆ, ಆದಿಲ್ ಶಾಹಿಯವರ ಆಕ್ರಮಣ ಭೀತಿ. ಶಿವಾಜಿಯ ನೌಕಾದಾಳಿ, ಮತ್ತು ಮರಾಠ, ಆಂಗ್ಲೀಯರ ದಾಳಿಗಳನ್ನು ಎದುರಿಸಬೇಕಾಯಿತು. ಇವುಗಳನ್ನೆಲ್ಲ ಇವರು ತಮ್ಮದೇ ಆದ ರೀತಿಯಲ್ಲಿ ಎದುರಿಸಿ ಇಲ್ಲಿನ ಸಾಂಸ್ಕೃತಿಕ ಸಮತೋಲನವನ್ನು ಕಾಪಾಡಿಕೊಂಡು ಬಂದರು.

ಕೆಳದಿ ನಾಯಕರ ಆಳ್ವಿಕೆಯ ಕಾಲದಲ್ಲಿ ಬಸ್ರೂರಿನ ವ್ಯಾಪಾರ; ಧಾರ್ಮಿಕ ಮತ್ತು ಆಡಳಿತದಲ್ಲೂ ಕೆಲವು ಬದಲಾವಣೆಗಳು ನಡೆದವು. ವಿಜಯನಗರದ ಆಳ್ವಿಕೆಯಲ್ಲಿ ಬಸ್ರೂರಿನ ವ್ಯಾಪಾರ ಮುಖ್ಯವಾಗಿ ಸೆಟ್ಟಿಯರ ವಶದಲ್ಲಿದ್ದರೆ ಕೆಳದಿ ನಾಯಕರ ಕಾಲದಲ್ಲಿ ಸಾರಸ್ವತರು ಬಾರ್ವಿಗಳು, ಮುಸ್ಲಿಮರು, ಅರಬರು, ಘಟ್ಟದ ಮೇಲಿನ ಬಣಜಿಗರು, ಕೆಲವು ಸಂದರ್ಭಗಳಲ್ಲಿ ಕ್ರೈಸ್ತರು ವ್ಯಾಪಾರದಲ್ಲಿ ಭಾಗವಹಿಸಿದರು. ಪೋರ್ಚುಗೀಸರ ಏಕಸ್ವಾಮ್ಯ ವ್ಯಾಪಾರವನ್ನು ಕೆಳದಿ ನಾಯಕರು ನಿಲ್ಲಿಸಿದರು. ಬಸ್ರೂರು ನಗರಾಡಳಿತದ ನಗರಪಾಲಿಕೆ ಹಕ್ಕನ್ನು ಕೆಳದಿ ನಾಯಕರು ಮೊಟಕುಗೊಳಿಸಿದರು. (೧೬೩೨ರ ನಂತರ) ಧಾರ್ಮಿಕವಾಗಿ ಬಸ್ರೂರಿನಲ್ಲಿ ಗೌಡಸಾರಿಸ್ವತರು ವೈಷ್ಣವ ಪಂಥ ಮತ್ತು ಘಟ್ಟದ ಮೇಲಿನವರು ವೀರಶೈವ ಪಂಥವನ್ನು ಪ್ರಚಾರಕ್ಕೆ ತಂದರು. ಆದರೆ ನಿರೀಕ್ಷಿಸಿದಷ್ಟು ಈ ಪಂಥಗಳು ಪ್ರಗತಿ ಹೊಂದಲಿಲ್ಲ.

ವ್ಯಾಪಾರ ವ್ಯವಹಾರದಲ್ಲಿ ಹಿಮ್ಮೆಟ್ಟುತ್ತಿದ್ದ ಬಸ್ರೂರ ಬಂದರು ಬ್ರಿಟೀಷರ ಆಳ್ವಿಕೆಯಲ್ಲಿ (ಕ್ರಿ.ಶ.೧೭೯೯ರಿಂದ ೧೯೪೭ರವರೆಗೆ) ಕ್ಷೀಣಿಸುತ್ತಾ ಪೂರ್ಣವಾಗಿ ಸ್ಥಗಿತಗೊಂಡಿತು. ಆರ್ಥಿಕ ವ್ಯವಹಾರವು ಕಡಿಮೆಯಾಗುತ್ತಿದ್ದಂತೆ, ಇಲ್ಲಿಯ ಸಾಂಸ್ಕೃತಿಕ ವೈಭವವು ಮಸುಕಾಗುತ್ತ ಬಂತು. ಕ್ರಿ.ಶ. ೧೭೯೯ರಲ್ಲಿ ಮದ್ರಾಸ್ ಪ್ರಾಂತ್ಯಕ್ಕೆ ಸೇರಿದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬ್ರಿಟೀಷ್ ಆಡಳಿತ ಪದ್ಧತಿ ಜಾರಿಗೆ ಬಂದಾಗ 'ಸರ್ ಥಾಮಸ್ ಮನ್ರೊ' ಮೊದಲ 'ಕಲೆಕ್ಟರ್' ಆಗಿದ್ದನು. ಅವನ ಬಂಗಲೆಯು ಬಸ್ರೂರಿನಲ್ಲಿತ್ತು. ಇಂದು ನಿವೇದಿತಾ ಹೈಸ್ಕೂಲು ಇರುವ ಸ್ಥಳವನ್ನು ಕಚೇರಿ ಗುಡ್ಡವೆಂದೇ ಕರೆಯುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಉತ್ತರ ಭಾಗದ, ಕಂದಾಯ ವಸೂಲಿ ಮೊದಲಾದ ಆಡಳಿತ ವ್ಯವಹಾರವನ್ನು ನಡೆಸುವಾಗ ಕಲೆಕ್ಟರ್ ಬಸ್ರೂರಿನಲ್ಲಿಯೇ ನೆಲೆಸುತ್ತಿದ್ದನು. ಬಾಸೆಲ್ ಮಿಶನ್ , ಹಿರಿಯ ಪ್ರಾಥಮಿಕ ಶಾಲೆಯ ಬದಿಯಲ್ಲಿರುವ 'ಮನ್ರೋ ವೆಲ್ ' (ಕ್ರಿ.ಶ.೧೮೦೦) ಮೊದಲ ಕಲೆಕ್ಟರನನ್ನು ಸ್ಮರಿಸುತ್ತದೆ. ಕ್ರಿ.ಶ. ೧೮೬೨ರಲ್ಲಿ ಕರಾವಳಿ ಪ್ರದೇಶವು ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡವೆಂದು ವಿಭಾಗವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಉತ್ತರ ತುದಿಯಲ್ಲಿರುವ ಪ್ರದೇಶಕ್ಕೆ ಕುಂದಾಪುರ ಎಂಬ ಹೆಸರು ಬಂತು. ಕುಂದಾಪುರ ತಾಲೂಕು ಪ್ರದೇಶಗಳಲ್ಲಿ ಆಡಳಿತಾತ್ಮಕವಾಗಿಯೂ ಬಸ್ರೂರಿನ ಮಹತ್ವ ಕಡಿಮೆಯಾಯಿತು. ಕರಾವಳಿಯ ರಸ್ತೆ ಕುಂದಾಪುರ-ಗಂಗೊಳ್ಳಿಗಾಗಿ ಹಾದು ಹೋದುದರಿಂದಲೂ ಪ್ರಾಕೃತಿಕ ತೊಂದರೆಗಳಿಂದ ಹಡಗುಗಳು ಬಸ್ರೂರಿಗೆ ಬರುವುದು ನಿಂತು ಹೋದುದರಿಂದ ಬಸ್ರೂರು ತನ್ನ ಇತಿಹಾಸದ ಗತ ವೈಭವಗಳನ್ನು ಮಾತ್ರ ಉಳಿಸಿಕೊಂಡಿತು. (ಬಿ.ಯೋಗೀಶ್ ಆಚಾರ್ಯ. ೧೯೯೭. ಪುಟ ೫೦)

## ೨.೩. ಧಾರ್ಮಿಕ ಹಿನ್ನೆಲೆ

'ಧರ್ಮ ಪಟ್ಟಣ ಬಸುರೆಪುರ' ಎಂದು ಕರೆಯಲ್ಪಟ್ಟು ಬಸ್ರೂರು ಇತಿಹಾಸದುದ್ದಕ್ಕೂ ವಿವಿಧ ಮತ ಧರ್ಮಗಳಿಗೆ ಆಶ್ರಯ ತಾಣವಾಗಿತ್ತು. ಇದು ಪ್ರಾಚೀನವಾದ ಹಲವು ದೇವಸ್ಥಾನಗಳುಳ್ಳ ಊರು. ಹಿಂದೆ ಈ ಊರಲ್ಲಿ ಹಲವಾರು ಜೈನ ದೇಗುಲಗಳಿದ್ದವಂತೆ ಹತ್ತನೇ ಶತಮಾನದ ಮೊದಲು ಈ ಪ್ರದೇಶದಲ್ಲಿ ಬೌದ್ಧಧರ್ಮವು ಹಬ್ಬಿಕೊಂಡಿತ್ತು. ನಂತರ ಉತ್ತರ ಭಾರತದಿಂದ ಬಂದ ನಾಥ ಪರಿಧೀಯ ಶ್ರದ್ಧಾಳುಗಳು ಆ ದೇಗುಲಗಳನ್ನೇ ಹಿಂದೂ ದೇಗುಲಗಳಾಗಿ ಪರಿವರ್ತಿಸಿದರು. ಮೊದಲ ಕಾಲದ ಹಲವಾರು ದೇಗುಲಗಳು ಮುಂದೆ ಹಿಂದೂ ಧರ್ಮದ ದೇವರ ಮಂದಿರಗಳಾದವು.

ಬಸ್ರೂರೂರಿನಲ್ಲಿ ಸುಮಾರು ೨೭ದೇವಾಲಯಗಳಿವೆ ಎಂದು ಅಂದಾಜು ಮಾಡಲಾಗಿದೆ. ಅವುಗಳಲ್ಲಿ ಪಡುಕೇರಿಯ 'ನಖರೇಶ್ವರ' ದೇವಾಲಯ ಪ್ರಮುಖವಾದುದು. ಈ ದೇವಾಲಯವನ್ನು 'ವಸುಮಹಾರಾಜ' ನಿರ್ಮಿಸಿದ್ದನೆಂದು ಪ್ರತೀತಿ ಇವೆ. ಅದಕ್ಕೆ ನಿರ್ದಿಷ್ಟ ಆಧಾರಗಳಿಲ್ಲ. ಪ್ರಾಚೀನ ಕಾಲದಿಂದಲೂ ಬಸ್ರೂರೂರು

ಒಂದು ಬಂದರು ಮತ್ತು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಇಲ್ಲಿ ವ್ಯಾಪಾರ ನಡೆಸುತ್ತಿದ್ದ 'ನಖರ' ಅಂದರೆ ವರ್ತಕ ಸಮುದಾಯ ಅಪಾರ ಸಂಖ್ಯೆಯಲ್ಲಿತ್ತು. ಇವರು ಶಿವನ ಆರಾಧಕರಾಗಿದ್ದುದರಿಂದ ಅವನನ್ನು 'ನಖರೇಶ್ವರ' ಎಂದು ಕರೆಯುತ್ತಿದ್ದರು. ಈ ದೇವಾಲಯ ಊರಿನ ಪ್ರಮುಖ ಕೇಂದ್ರಸ್ಥಾನ, ಬಸ್ರೂರು, ಅನಗಳ್ಳಿ, ಬಳ್ಕೂರು ಜಪ್ತಿ ಮತ್ತು ಕಂದಾವರ ಎಂಬ ಪಂಚ ಗ್ರಾಮಗಳಿಗೆ ಇದೇ ಪ್ರಧಾನ ದೇವಸ್ಥಾನ. ಹಿಂದೆ ಉಂಬಳಿಯಾಗಿ ಬಿಟ್ಟಿರುವ ಭೂಮಿಗಳಿದ್ದರೂ, ಒಕ್ಕಲು ಮಸೂದೆಯಿಂದಾಗಿ ಸರಕಾರವೂ ವಾರ್ಷಿಕ ಪರಿಹಾರ ರೂ. ೯೫೫.೩೦ನ್ನು ಮತ್ತು ತಸ್ತೀಕು ರೂ. ೨೨೭೨.೫೦ನ್ನು ಪಡೆಯುತ್ತಿದೆ. ದೇವಾಲಯದ ನಿತ್ಯ ವಿಧಿಗಳು ಮತ್ತು ಉತ್ಸವಾದಿಗಳೆಲ್ಲ ಭಕ್ತಾದಿಗಳ ನೆರವಿನಿಂದ ನಡೆಯುತ್ತವೆ.

ಈ ದೇವಾಲಯವನ್ನು ಸುಮಾರು ೧೫-೧೬ ನೆಯ ಶತಮಾನದ ನಂತರದ ಶಾಸನಗಳಲ್ಲಿ 'ಶ್ರೀ ಮಹಾಲಿಂಗೇಶ್ವರ' ದೇವಾಲಯವೆಂದು ಕರೆಯಲಾಗಿದ್ದರೂ, ಅದಕ್ಕಿಂತ ಹಿಂದೆ ಎಲ್ಲಾ ಶಾಸನಗಳಲ್ಲಿ 'ಬಸ್ರೂರ ನಖರೇಶ್ವರ' ಎಂದೇ ಕರೆಯಲಾಗಿದೆ. ನಖರೇಶ್ವರರನ ಅತ್ಯಂತ ಪ್ರಾಚೀನ ಉಲ್ಲೇಖ ಕ್ರಿ.ಶ. ೧೧೫೪ರ ಆಳುಪ ರಾಜ 'ಪಾಂಡ್ಯ ಚಕ್ರವರ್ತಿ ಭುಜಬಳ ವೀರ ಕವಿಯಾಳ್ವೇಂದ್ರ ದೇವ'ನ ಶಾಸನದಲ್ಲಿದೆ. (s.i.i. vo-೯. part ೧-no ೩೯೩) ಈಗ ಪ್ರಸ್ತುತ ಪ್ರಚಲಿತವಿರುವ ಹೆಸರು 'ಮಹತೋಭಾರ ಮಹಾಲಿಂಗೇಶ್ವರ' ಈ ದೇವಾಲಯ ಆಲೂಪ, ವಿಜಯನಗರ ಇಕ್ಕೇರಿಯ ದೊರೆಗಳಿಂದ ಗೌರವಿಸಲ್ಪಡುತ್ತಿದ್ದ ಭವ್ಯ ದೇವಾಲಯ, ಮಹಾದ್ವಾರ ಹಾಗೂ ಮಂಟಪ, ಹೊರಪ್ರಕಾರ, ಧ್ವಜಸ್ತಂಭ, ಕಂಚಿನ ದೀಪಸ್ತಂಭ, ಪ್ರಧಾನ ಬಲಿಪೀಠ, ಒಳಪ್ರಕಾರ, ಮಂಟಪಗಳು ಈ ದೇವಾಲಯದ ವಿವಿಧ ಅಂಗಗಳು. ಒಳಪ್ರಕಾರದಲ್ಲಿ ನಂದಿ ಮಂಟಪ ಮತ್ತು ಗಣೇಶನ ಗುಡಿಗಳಿವೆ. ಒಳಪ್ರಕಾರ ಆಯತಾಕಾರದಲ್ಲಿದ್ದು ಬಹಳ ವಿಶಾಲವಾಗಿದೆ. ಮಹಾಲಿಂಗೇಶ್ವರ ದೇವಾಲಯದ ಪ್ರಮುಖ ಆಕರ್ಷಣೆ ಗುಡಿಯ ಮುಖ ಮಂಟಪದ ಎದುರು ಸ್ಥಾಪಿಸಲಾಗಿರುವ ಸುಮಾರು ಐದು ಅಡಿ ಎತ್ತರದ ಪರಶುಪಾಣೆ ಮತ್ತು ಶೂಲಪಾಣೆ ಎಂಬೆರಡು ದ್ವಾರಪಾಲಕರ ಸುಂದರ ಕಂಚಿನ ವಿಗ್ರಹಗಳು ಈ ವಿಗ್ರಹಗಳ ನವುರಾದ ಕೆತ್ತನೆಯ ಕೆಲಸ. ಮತ್ತು ನಿಂತ ನಿಲುವು ಮನ ಮೋಹಕವಾಗಿದೆ.[೩] ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡಿರಬಹುದಾದ ಒಂದು ಸುಂದರವಾದ ಶಿಲಾನಂದಿಯು ದೇವಾಲಯದ ತೀರ್ಥ ಮಂಟಪದಲ್ಲಿದೆ. ಎದುರು ಗೋಪುರದ ಶಿಲಾಸ್ತಂಭಗಳಲ್ಲಿ ಸುಂದರವಾದ ಶಿಲ್ಪಕಾರ್ಯಗಳಿವೆ. ಇಲ್ಲಿಯ ಶಿಲ್ಪಕಲೆಯಲ್ಲಿ ವಿಜಯನಗರದ ಪ್ರಭಾವವು ಕಂಡುಬರುತ್ತದೆ.

ದೇವಾಲಯದ ವಾಯುವ್ಯ ಮೂಲೆಯಲ್ಲಿನ ಸುಮಾರು ಒಂದು ಅಡಿ ಎತ್ತರದ ಮಹಿಷಮರ್ದಿನಿಯ ಶಿಲಾಮೂರ್ತಿ ಪ್ರೇಕ್ಷಣೀಯವಾಗಿದೆ. ಗೋಪುರದ ಹೊರಗೆ ಸುಮಾರು ೪೦ಅಡಿ ಎತ್ತರವಾದ ಭವ್ಯ ಶಿಲಾಸ್ತಂಭವಿದೆ. ದೇವಾಲಯದ ಹೊರಪ್ರಾಕಾರದಲ್ಲಿರುವ ಪೀಠದ ಮೇಲೆ ಬೃಹತ್ ಧ್ವಜಸ್ತಂಭವಿದೆ. ಇದರ ಮುಂದೆ ಅತ್ಯಂತ ಸುಂದರವಾಗಿ ಎರಕ ಹೊಯ್ಯಲ್ಪಟ್ಟ ಕಂಚಿನ ದೀಪಸ್ತಂಭದಲ್ಲಿ ಗಜಮುಖಗಳನ್ನು ರಚಿಸಲಾಗಿದೆ. ಗರ್ಭಗ್ರಹಕ್ಕೆ

ಎದುರಾಗಿರುವ ಭಾಗದಲ್ಲಿರುವ ಗಜದ ಭುಜದ ಮೇಲೆ ಗಣಪತಿಯನ್ನು ರಚಿಸಲಾಗಿದೆ. ಈ ಗಜಾರೂಢ ಗಣಪತಿಯನ್ನು ಪೂಜಿಸುವ ಸಲುವಾಗಿ ಸಿಮೆಂಟಿನ ಒಂದು ಮಂಟಪ ರಚಿಸಲಾಗಿದೆ. ಇದು ಕಂಚಿನ ಸ್ತಂಭದ ಸೌಂದರ್ಯವನ್ನು ನಿರುಪಗೊಳಿಸಿದೆ ಬಹುಭಾಗವನ್ನು ಮುಚ್ಚಿಹಾಕಿದೆ. ಈ ಮಂಟಪಕ್ಕೆ ಹೋಗಲು ಗರ್ಭಗ್ರಹಕ್ಕೆ ಬೆನ್ನು ಹಾಕಿ ಹತ್ತುವಂತೆ ಏಣಿ ಇಡಲಾಗಿದೆ.

ಮಹಾಲಿಂಗೇಶ್ವರನ ಜಾತ್ರೆಯ ಆಗುಹೋಗುಗಳಲ್ಲಿ ಸರ್ವ ಮತದವರು ಕೊಡುಗೆಯೂ ಇದೆ. ಇಂದಿಗೂ ಬಸ್ರೂರೂರಿನ ದೇವಾಲಯದ ಪ್ರಧಾನ ರಥದ ಮೇಲಿನ ಕೆಲಸವನ್ನು ಮಹಮ್ಮದೀಯರು ಮಾಡಬೇಕಾಗಿದೆ.[೪]

ಹಿಂದೆ ದೇವಾಲಯದ ಗರ್ಭಗುಡಿಯ ತಾಮ್ರದ ಹೊದಿಕೆಯುಳ್ಳ ಮಾಡನ್ನು ಹೊಂದಿತ್ತು. ಇತ್ತೀಚಿಗೆ ಅಂದರೆ ಸುಮಾರು ೩೦ವರ್ಷಗಳ ಹಿಂದೆ ದೇವಾಲಯ ಸಂಪೂರ್ಣವಾಗಿ ನವೀಕರಣಗೊಂಡಿದೆ. ಮರದ ದಳಿ, ಮತ್ತು ತಾಮ್ರದ ಹೊದಿಕೆಯನ್ನು ತೆಗೆದು ಕಾಂಕ್ರೇಟಿನ ಗುಮ್ಮಟಗಳನ್ನು ನಿರ್ಮಿಸಲಾಗಿದೆ.

ಈ ದೇವಾಲಯ ಆಲೂಪ, ವಿಜಯನಗರ, ಇಕ್ಕೇರಿ ದೊರೆಗಳಿಂದ ಶ್ರೀಮಂತ ನಖರವರ್ತಕ ಸಂಘದವರಿಂದ ಉಂಬಳಿ, ದತ್ತಿ ಪಡೆದು ಸಮೃದ್ಧವಾಗಿ ಬೆಳೆದಿತ್ತು. ಭಕ್ತಭಿಮಾನಿಗಳ ಸಹಕಾರದಿಂದ ಕಾಲಕಾಲಕ್ಕೆ ಇಲ್ಲಿ ನಡೆಯತಕ್ಕ ಧಾರ್ಮಿಕ ವಿಧಿಗಳೆಲ್ಲ ಸಾಂಗವಾಗಿ ನೆರವೇರುತ್ತಿದ್ದವು. ವಿಜಯನಗರದ ಅರಸರ ಕಾಲದಲ್ಲಿ ಈ ದೇವಾಲಯ ವೈಭವದಿಂದ ಮೆರೆಯುತ್ತಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ವಿಜಯನಗರದ ಅರಸರ ಪ್ರಭಾವದಿಂದ ಇಲ್ಲಿಯೂ ದೇವದಾಸಿ ಪದ್ಧತಿಯು ಬೆಳಕಿಗೆ ಬಂದಿತೆಂದು ಪ್ರತೀತಿ ಇದೆ. ದೇವದಾಸಿಯರ ಹಾಡುಗಳಲ್ಲಿ ತೆಲುಗು ಭಾಷೆಯ ಹಾಡುಗಳಿರುವುದು ಮೇಲಿನ ಅಭಿಪ್ರಾಯಕ್ಕೆ ನಿದರ್ಶನವಾಗಿದೆ.[೫] ತೆಲುಗು ಮಾತನಾಡುವ ನರ್ತಕಿಯರು ಮತ್ತು ವಿದ್ವಾಂಸರಿಗೆ ಬಸ್ರೂರು ಆಶ್ರಯ ನೀಡಿತ್ತು. ಬಸ್ರೂರಿನಲ್ಲಿ ಇಂದಿಗೂ 'ತೆಲುಗರ ಹಿತ್ತು' ಎಂದು ಕರೆಸಿಕೊಳ್ಳುವ ಪ್ರದೇಶವೊಂದು ಇದಕ್ಕೆ ನಿದರ್ಶನವಾಗಿದೆ.

### ಟಿಪ್ಪಣಿಗಳು

೧. ಶ್ರೀ ತಿರುಮಲ ವೆಂಕಟರಮಣ ದೇವಸ್ಥಾನದ ಪಕ್ಕದಲ್ಲಿಯೇ ಇರುವ ಅರ್ಚಕರ ಮನೆಯ ಎತ್ತರದ ಗೋಡೆಯಲ್ಲಿ ಅಳವಡಿಸಿದ ಪೋರ್ಚುಗೀಸ್ ಲಾಂಛನವು ಆಕರ್ಷಣೀಯವಾಗಿದೆ.

೨. ಎಸ್.ಐ.ಐ. - ix ಭಾಗ - II, ಶಾ.ಸಂ. ೪೫೫ರಲ್ಲಿ ವ್ಯಾಪಾರಿ ಸಂಘಟನೆಗಳ ಉಲ್ಲೇಖವಿದೆ.

೩. ದೇವಾಲಯಕ್ಕೆ ಆಗಮಿಸುವ ಭಕ್ತರು ತಮ್ಮ ಕೈಕಾಲು ಸೊಂಟ ನೋವುಗಳ ನಿವಾರಣೆಗಾಗಿ ಈ ದ್ವಾರ ಪಾಲಕರ ಮೂರ್ತಿಗಳ ಮೈ ಕೈಗಳನ್ನು ಸವರುತ್ತಾರೆ.

೪. ಪ್ರಧಾನ ರಥದ ಮೇಲಿನ ಗೂಡಿನ ಕೆಲಸವನ್ನು ಮಹಮ್ಮದಿಯರು ಮಾಡುವ ವಾಡಿಕೆಯು ಈಗಲೂ ನಡೆದುಕೊಂಡು ಬರುತ್ತಿದೆ.

೫. ಮೂಡುಕೇರಿ ತೊಪ್ಪು ಕಟ್ಟೆ ವಸಂತ ದಿನ ಹೇಳುವ ಹಾಡು ತೆಲುಗಿನಲ್ಲಿರುವುದನ್ನು ಗಮನಿಸಬಹುದು.

ಭಾವಜೂದು ದೈನಾ ಆ ಪಶುಪತಿ<br>
ಭಾವಕುಮಾರು ನೀ ಭಕ್ತವತ್ಸಲ<br>
ನೀವೆ ದೈವಮು ನಿರತಮು ಗಜಮುಖ<br>
ನಿನ್ನ ನಂಬಿ ನಾನು ಏ ಗಣಪತೆ | ‖ ಪ ‖



ಅಧ್ಯಾಯ : ೩

# ದೇವದಾಸಿ ಪರಂಪರೆ

ಅಧ್ಯಾಯ : ೩

# ದೇವದಾಸಿ ಪರಂಪರೆ

'ದೇವದಾಸಿ' ಎಂದರೆ ದೇವರಿಗೆ ದಾಸಿಯಾದವಳು, 'ದೇವರ ಸೇವಕಿ' ಎಂದು ಅರ್ಥೈಸಬಹುದು. ಸ್ಥೂಲವಾಗಿ ಪವಿತ್ರ ದಾಸಿ, ದೇವಾಲಯದ ನರ್ತಕಿ, ದೇವಾಲಯದ ಕನ್ಯೆ, ದೇವರ ನಾಯಕಸಾನಿ, ಗುಡಿಸೆಟ್ಟಿ, ಎಂಬ ಪದಗಳನ್ನು ಬಳಸಲಾಗಿದೆ. ಇದು ಧಾರ್ಮಿಕ ಹಾಗೂ ಸಾಂಸ್ಕೃತಿಕವಾಗಿ ಆಚರಣೆಯಲ್ಲಿದ್ದ ಜಗತ್ತಿನ ಅತ್ಯಂತ ಪ್ರಾಚೀನ ಪದ್ಧತಿ. ಒಂದು ಕಾಲಕ್ಕೆ ಅತ್ಯಂತ ಪ್ರಬಲವಾಗಿದ್ದು ಈಗ ಬಹುತೇಕ ಮರೆಯಾಗಿರುವ ವರ್ಣರಂಜಿತ ಸಂಪ್ರದಾಯವೊಂದರ ದ್ಯೋತಕ ಶುದ್ಧ ಹಾಗೂ ಪವಿತ್ರ ದೇಹದೊಂದಿಗೆ ದೇವರ ಸೇವೆಗೆ ನಿಯುಕ್ತಿಗೊಂಡ ಹುಡುಗಿಯರು ಸಂಗೀತ, ನೃತ್ಯಾದಿ ಕಲೆಗಳಿಗಾಗಿಯೇ ತಮ್ಮ ಜೀವನವನ್ನು ಮುಡುಪಾಗಿಡುತ್ತಿದ್ದರು. ಇಂತಹ ಕಲೆಗಳ ಆರಾಧಕರಾಗಿ, ಆ ಕಲೆ ಹಿಂದಿನಿಂದ ಇಂದಿನವರೆಗೆ ಉಳಿದು ಬೆಳೆದು ಬರಲು ದೇವದಾಸಿಯರೇ ಬಹುಮಟ್ಟಿಗೆ ಕಾರಣ.

ಒಂದು ಕಾಲದಲ್ಲಿ ಅವರಿಲ್ಲದ ದೊಡ್ಡ ದೇವಾಲಯಗಳಿರಲಿಲ್ಲ, ಆಸ್ಥಾನಗಳಿರಲಿಲ್ಲ, ಮೆರವಣಿಗೆಗಳಿರಲಿಲ್ಲ, ದೇವರ ಉತ್ಸವದ ಮೆರವಣಿಗೆಯಲ್ಲಿ, ಊರಿನ ಶ್ರೀಮಂತರ ಮನೆಯ ಮದುವೆಗಳಲ್ಲಿ ಅವರು ಹಾಡಬೇಕು, ಕುಣಿಯಬೇಕು, ಊರಿನ ಸಾಂಸ್ಕೃತಿಕ ಚಟುವಟಿಕೆಗಳಲ್ಲೆಲ್ಲ ಅವರದು ಆಕರ್ಷಣೆಯ ಪ್ರಮುಖ ಪಾತ್ರ. ದೇವಾಲಯದಲ್ಲಿ ದೇವರಿಗೆ ಸೇವೆ ಸಲ್ಲಿಸುವುದರೊಂದಿಗೆ ಸಾರ್ವಜನಿಕರಿಗೂ ಮನೋರಂಜನೆ ಒದಗಿಸುತ್ತಿದ್ದರು. ಕಣ್ಣಿಗೆ ಕಾಣದ ದೇವರನ್ನು ಮದುವೆಯಾಗುವ ಇವರು ನಿತ್ಯ ಸುಮಂಗಲೆಯರು. ಇಂತಹ ಒಂದು ಸಂಪ್ರದಾಯ ಶುದ್ಧ ಸಾಂಸ್ಕೃತಿಕ ಮತ್ತು ಧಾರ್ಮಿಕ ಆವರಣದಲ್ಲಿಯೇ ಜನ್ಮ ತಳೆದರೂ, ಮುಂದೆ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ, ಪ್ರಭಾವ ಶಾಲಿಗಳ ಬಿಗಿ ಮುಷ್ಠಿಯಿಂದ ಅನೈತಿಕತೆಯ ರೂಪಪಡೆದುಕೊಂಡದ್ದು ದುರ್ದೈವದ ಸಂಗತಿ.

## ೩.೧. ದೇವಾಲಯ ಮತ್ತು ನೃತ್ಯ

ಭಾರತೀಯ ಸಂಸ್ಕೃತಿಯಲ್ಲಿ ದೇವಾಲಯಗಳಿಗೆ ಮಹತ್ವದ ಸ್ಥಾನವಿದೆ. ದೇವಾಲಯಗಳು ಊರಿನ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮೊದಲಾದ ಪ್ರತಿಯೊಂದು ಚಟುವಟಿಕೆಗಳನ್ನು ನಿಯಂತ್ರಿಸುತ್ತಿದ್ದವು. ರಾಜ ಮಹಾರಾಜರುಗಳೆಲ್ಲ ಈ ದೇವಾಲಯಗಳ ಪೋಷಕರಾಗಿರುತ್ತಿದ್ದರು. ಆಳರಸರ 'ಆಸ್ಥಾನ' ವನ್ನು ಹೊರತುಪಡಿಸಿದರೆ

ನಂತರದ ಸ್ಥಾನ ದೇವಾಲಯವೇ ಹೊಂದಿತ್ತು. ರಾಜನು ಪ್ರತ್ಯಕ್ಷ ದೇವತೆಯಾದರೆ, ಊರಿನ ದೇವಸ್ಥಾನದ ದೇವರು ಪರೋಕ್ಷವಾಗಿ 'ರಾಜ' ಎಂಬ ನಂಬಿಕೆಯೂ ಜನಪದರಲ್ಲಿ ಬೆಳೆದಿತ್ತು. ಈ ಹಿನ್ನೆಲೆಯಲ್ಲಿ ರಾಜ ವೈಭವದಲ್ಲಿರುವ ರಾಜೋಪಚಾರಗಳು ದೇವಸ್ಥಾನದಲ್ಲಿಯೂ ನಡೆಯುತ್ತಿದ್ದವು. ದೇವರನ್ನು ದೇವಾಲಯದಲ್ಲಿ ನೆಲೆಸಿರುವ ಒಬ್ಬ ವ್ಯಕ್ತಿಯೆಂದು ಭಾವಿಸಿ, ರಾಜನಿಗೆ ಸಲ್ಲುತ್ತಿದ್ದ ಎಲ್ಲ 'ಮರ್ಯಾದೆ'ಗಳನ್ನು ದೇವರಿಗೂ ಸಲ್ಲಿಸುತ್ತಿದ್ದರು. "ಅವುಗಳಲ್ಲಿ ಪೂರ್ವಷೋಡಶೋಪಚಾರ ಮತ್ತು ಉತ್ತರ ಷೋಡಶೋಪಚಾರ ಎಂದು ಎರಡು ವಿಧಗಳಿವೆ. ಉತ್ತರ ಷೋಡಶೋಪಚಾರ ಸೇವೆಯಲ್ಲಿ ನೃತ್ಯವೂ ಒಂದು. ಶಾಸ್ತ್ರೋಕ್ತವಾಗಿ ನೃತ್ಯವು ಅಷ್ಟಾವಧಾನ ಸೇವೆಯಲ್ಲಿ ಬರುವುದಿಲ್ಲ." (ವಾದಿರಾಜ ಭಟ್ಟ ಕನರಾಡಿ. ೧೯೮೭. ಪುಟ-೪೭)

ದೇವರ ಪೂಜೆ - ಪುನಸ್ಕಾರಗಳಲ್ಲಿ 'ಅಂಗಭೋಗ' ಮತ್ತು 'ರಂಗಭೋಗ' ಎಂಬ ಎರಡು ವಿಧಗಳಿವೆ. ಕರ್ನಾಟಕದ ಶಾಸನಗಳಲ್ಲಿಯು ಈ ವಿಚಾರವನ್ನು ಡಾ. ಚಿದಾನಂದ ಮೂರ್ತಿಯವರು ಗುರುತಿಸಿದ್ದಾರೆ. "ವಿಗ್ರಹದ ದೇಹಕ್ಕೆ ಸಲ್ಲುವ ಭೋಗ ಎಂದರೆ ಸ್ನಾನ, ಗಂಧಲೇಪನ, ಧೂಪ, ದೀಪ, ಪುಷ್ಪ ಇತ್ಯಾದಿಗಳು ಅಂಗಭೋಗಗಳು. ಗರ್ಭಗುಡಿಯ ಮುಂದಿನ ರಂಗದ ಮೇಲೆ ಅಂದರೆ ದೇವತಾ ಮೂರ್ತಿಯ ಮುಂದೆ ಸುಂದರಿಯರಿಂದ ನಡೆಯುವ ಗೀತ ನೃತ್ಯಗಳೇ ರಂಗಭೋಗಗಳು ದೇವದಾಸಿಯರು ರಂಗಭೋಗದ ಉಪಕರಣಗಳು. (ಡಾ. ಚಿದಾನಂದ ಮೂರ್ತಿ, ೧೯೬೬. ಪುಟ- ೧೮೧)

ಧಾರ್ಮಿಕ ಸಂಸ್ಕಾರವಾಗಿಯೇ ನೃತ್ಯವು ಹುಟ್ಟು ಪಡೆಯಿತು. ನೃತ್ಯ ಕಲೆಯಲ್ಲಿ ಶ್ರೇಷ್ಠವಾದ ಕಲೆಯೆಂದು ಪುರಾತನ ಕಾಲದಲ್ಲೇ ಪುರಸ್ಕಾರ ಪಡೆದಿತ್ತು. "ಮುನಿಗಳು ನಾಟ್ಯವನ್ನ ದೇವತೆಗಳಿಗೆ ಪ್ರಿಯವಾದ ಚಾಕ್ಷುಷ ಕ್ರತು, ಎಂದು ಕರೆಯುತ್ತಾರೆ. ರುದ್ರನು ಇದನ್ನು ಅರ್ಧನಾರೀಶ್ವರ ರೂಪದಲ್ಲಿ ತಾಂಡವ, ಲಾಸ್ಯ, ಎಂದು ಇಬ್ಬಗೆಯಾಗಿ ಪ್ರಕಟಪಡಿಸಿದ್ದಾನೆ. ಸತ್ತ್ವರಜಸ್ ತಮೋಗುಣಗಳೆಂಬ ಗುಣತ್ರಯದಿಂದ ಉದ್ಭವವಾದ ಈ ಲೋಕ ಚರಿತವು ನಾನಾ ರಸರಂಜಿತವಾಗಿ ಇಲ್ಲಿ 'ದೃಶ್ಯ' ವಾಗುವುದು. ಭಿನ್ನರುಚಿಯಾದ ಜನಕೋಟಿಗೆ ನಾನಾ ರೀತಿಯಾಗಿ ಆನಂದದಾಯಕವಾಗುವ ಸಾಧನವೆಂದರೆ ನಾಟ್ಯವೊಂದೇ ಸರಿ. ಹೀಗೆಂದು ಕವಿ ಕುಲಗುರು ಕಾಳಿದಾಸನು ನಾಟ್ಯ ಮಹಿಮೆಯನ್ನು ಕೊಂಡಾಡಿದ್ದಾನೆ." (ಕೃಷ್ಣರಾವ್, ಎಂ.ವಿ. ಕೇಶವ ಭಟ್ಟ, ಎಂ. ೧೯೭೦, ಪುಟ - ೧೦೭೬)

ನಾಟ್ಯವು ದೈವಿಕ ಹಿನ್ನೆಲೆಯಲ್ಲಿ ಹುಟ್ಟು ಪಡೆದಿರುವುದರಿಂದ ಶ್ರೇಷ್ಠವಾದ ಕಲೆ ಎಂದು ಮಾನ್ಯತೆ ಪಡೆದಿತ್ತು. ಇದು ನಯನ ಮನೋಹರವಾದ ಕಲೆಯೊಂದೇ ಅಲ್ಲದೆ ಮೋಕ್ಷ ಸಿದ್ಧಿಗೂ ಸಾಧಕವಾದ ಪವಿತ್ರ ವಿದ್ಯೆಯೆಂದು ಅಂದಿನವರ ಭಾವನೆಯಾಗಿತ್ತು. "ನಾಟ್ಯ ರಸಿಕರನ್ನು ಸಾತ್ವಿಕ ಭಕ್ತಿ ಪ್ರೇರಿತರನ್ನಾಗಿ ಮಾಡಿ ಲೋಕದ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣೀಭೂತನಾದ ಭಗವಂತನೊಡನೆ ಅವರ ತಾದಾತ್ಮ ಸಿದ್ಧಿಗೂ ನಾಟ್ಯವು ಕಾರಣವಾಗಬಹುದು." (ಕೃಷ್ಣರಾವ್, ಎಂ.ವಿ. ಕೇಶವ ಭಟ್ಟ, ಎಂ. ೧೯೭೦, ಪುಟ - ೧೦೭೭)

ನೃತ್ಯವು ಮೋಕ್ಷ ಸಿದ್ಧಿಗೂ ಸಾಧಕವಾದ ಶ್ರೇಷ್ಠ ಕಲೆಯೆಂದು ಮಾನ್ಯತೆ ಪಡೆದಿರುವುದರಿಂದ ಯಜ್ಞ ಯಗಾದಿಗಳಲ್ಲೂ ಪ್ರಾಮುಖ್ಯತೆ ಪಡೆದಿತ್ತು. ನಾಟ್ಯ ಅಭಿನಯಗಳನ್ನು ವೇಶ್ಯೆಯರಲ್ಲದೆ ಉತ್ತಮ ಕುಲದವರು ಕಲಿಯುತ್ತಿದ್ದರು. "ರಾಜ ರುಧ್ರಾಯಣನು ವೇಣುಗಾನ ಮಾಡಿದಾಗ ರಾಣಿಯಾದ ಚಂದ್ರಾವತಿಯು ನಾಟ್ಯ ಮಾಡಿದಳೆಂದು 'ದಿವ್ಯಾವಾದನ' ದಲ್ಲಿ ಹೇಳಿದೆ. ಉದಯನನ ವೀಣಾವಾದನಕ್ಕನುಸಾರವಾಗಿ ಅವನ ರಾಣಿಯು ನಾಟ್ಯವಾಡಿದಳು.....ಕಾಳಿದಾಸನು, ತನ್ನ ಆಸ್ಥಾನ ನಟರೊಡನೆ ಅಗ್ನಿವರ್ಮನು ಅಭಿನಯ ಮಾಡಿದನೆಂದು 'ರಘುವಂಶ'ದಲ್ಲಿಯೂ, 'ಮಾಲವಿಕಾಗ್ನಿ ಮಿತ್ರ' ದಲ್ಲಿ 'ಯಥಾರಸ ಮಭಿನಯತಿ' ಎಂದು ಹೇಳಿರುವನು. ಜೈನ ಗ್ರಂಥಗಳಲ್ಲಿ ಇಂದ್ರನ ನಾಟ್ಯದ ವರ್ಣನೆಗಳಿವೆ. ಕರ್ನಾಟಕದ ರಾಣಿಯರಾದ 'ಶಾಂತಲಾ' ಚಂದಲಾ, ಪದ್ಮಲಾ, ಮುಂತಾದವರು ಬಹಿರಂಗವಾಗಿ ರಾಜನ ಮುಂದೆ ನೃತ್ಯ ಮಾಡಿ ಸಂತುಷ್ಟನಾದ ರಾಜನಿಂದ ಬಹುಮಾನವಾಗಿ ಪಡೆದ ಗ್ರಾಮಗಳನ್ನು ದೇವ ಬ್ರಾಹ್ಮಣರಿಗೆ ದಾನ ಮಾಡಿದಂತೆ ಶಾಸನಗಳು ಹೇಳುವುವು" (ಡಾ. ಶ್ರೀಕಂಠಶಾಸ್ತ್ರಿ. ೧೯೫೪. ಪುಟ-೨೬೪)

ಹೀಗೆ ಉನ್ನತ ಕುಲದವರೂ ಸುಶಿಕ್ಷಿತೆಯರೂ ಆದ ಯುವತಿಯರು ನೃತ್ಯ ಕಲಾ ಪರಿಣತೆಯರಾಗಿ ದೇವಾಲಯಗಳಲ್ಲಿ ತಮ್ಮ ಕಲಾ ಪ್ರೌಢಿಮೆಯನ್ನು ಪ್ರದರ್ಶಿಸುತ್ತಿದ್ದರು. ಇದರಿಂದ ದೇವರ ಸೇವೆ ಮತ್ತು ಪ್ರೇಕ್ಷಕರ ಮನೋರಂಜನೆ ಇವೆರಡು ನಡೆಯುತ್ತಿದ್ದವು. ಕಾಲಕ್ರಮದಲ್ಲಿ ನೃತ್ಯವೇ ಕಾಯಕವಾದ ದೇವದಾಸಿಯರದೇ ಪ್ರತ್ಯೇಕ ಜಾತಿ ವ್ಯವಸ್ಥೆಯು ಏರ್ಪಟ್ಟು ಸಮಾಜದಲ್ಲಿ ಅವರದೇ ಆದ ಪಂಗಡವೊಂದು ತಲೆದೋರಿತು. ಅವರದು ಗೌರವದಾಯಕ ವೃತ್ತಿ. ದೈವ ಕೈಂಕರ್ಯ ವೃತ್ತಿ ಎಂದು ಸಾಮಾಜಿಕ ಮನ್ನಣೆ ಪಡೆದಿತ್ತು. ಸಾಹಿತ್ಯ, ಸಂಗೀತ, ನೃತ್ಯ, ಮುಂತಾದ ನಾನಾ ಕಲೆಗಳಲ್ಲಿ ಅವರು ಪರಿಣಿತರಾಗಿದ್ದರು. ಅಂದು ಅವರಿಗೆ ಧಾರ್ಮಿಕವಾಗಿ ಮಹತ್ವದ ಸ್ಥಾನವಿತ್ತು. "ಸುಮಾರು ಹನ್ನೊಂದನೆಯ ಶತಮಾನದ ಹೊತ್ತಿಗೆ ಈ ಉದಾತ್ತ ಕಲೆಯ ಧಾರ್ಮಿಕ ಮತ್ತು ಆಧ್ಯಾತ್ಮಿಕ ಮಹತ್ವವು ಅವನತಿಗೆ ಬಿದ್ದು ಈ ದೈವ ಕೈಂಕರ್ಯ ವೃತ್ತಿಯನ್ನು ಹಲವರು ದೇವದಾಸಿಯರು ಸ್ವ-ಪ್ರಯೋಜನಕ್ಕೆ ಬಳಸಿಕೊಳ್ಳತೊಡಗಿದರು. ವಿಷಯ ಸುಖಲಾಲಸೆಗೆ ಬಲಿಯಾಗಿ ಶೀಲ ಶುದ್ಧಿಯನ್ನು ಕಳೆದುಕೊಂಡರು. ದೇವರ ಸೇವೆಗೆ ಮೀಸಲಾಗಿದ್ದ ಪವಿತ್ರ ವೃತ್ತಿ ವಿಷಯ ಸೇವೆಯ ಸಾಧನವಾಯಿತು." ( ಕೃಷ್ಣರಾವ್, ಎಂ.ವಿ, ಕೇಶವ ಭಟ್ಟ ಎಂ, ೧೯೭೦, ಪುಟ - ೧೦೭೮) ಈ ವೃತ್ತಿಯು ಘನತೆಯ ಕಸುಬಾಗುವ ಬದಲು ಅಗ್ಗದ ಕಸುಬಾದುದೇ ಅದಕ್ಕೆ ಕಾರಣ.

## ೩.೨ ಪ್ರಾದೇಶಿಕ ರೂಪಗಳು

ಸಾಮಾನ್ಯವಾಗಿ ದೇವರ ಸೇವೆಗಾಗಿ ನಿಯುಕ್ತಿಗೊಂಡ ಎಲ್ಲ ಹೆಣ್ಣುಗಳನ್ನು ದೇವದಾಸಿಯರೆಂದೇ ಉಲ್ಲೇಖಿಸುವುದು ವಾಡಿಕೆ. ದೇವರ ಸೇವಕರು ಎಂಬ ಸಾಮಾನ್ಯ ಅರ್ಥದಲ್ಲಿ ಎಲ್ಲರನ್ನೂ ದೇವದಾಸಿ ಎಂಬ ತಲೆಬರಹದಡಿಯಲ್ಲಿಯೇ ವಿಶ್ಲೇಷಿಸುತ್ತೇವೆ. ಪಾತರದವಳು, ಬಸವಿ, ಸೂಳೆ, ಜೋಗತಿ, ದೇವದಾಸಿ ಈ ಪದಗಳ ಕುರಿತಂತೆ ಜನಸಾಮಾನ್ಯರಲ್ಲಿ ಗೊಂದಲಗಳಿವೆ. ಈ ಎಲ್ಲ ಪಾರಿಭಾಷಿಕ ಪದಗಳು ದೇವದಾಸಿ ವೃತ್ತಿಯ ಸೂಚಕಗಳಾಗಿವೆ. ಈ ಹೆಸರಿನ ವೃತ್ತಿ ಮತ್ತು ಈ ವೃತ್ತಿಯನ್ನು ಕೈಗೊಂಡ ಸ್ತ್ರೀಯರಿಗೆ ಪ್ರಾದೇಶಿಕವಾಗಿ ವಿವಿಧ ಹೆಸರುಗಳಿವೆ. "ತಮಿಳುನಾಡಿನಲ್ಲಿ ಇವರನ್ನು ದೇವರಡಿಯಾರ್ ಅಥವಾ ದಾಸಿಯರು ಎಂದು ಕರೆಯಲಾಗುತ್ತಿತ್ತು. ದೇವರ ಗುಲಾಮರು ಅಥವಾ ದಾಸಿಯರು ಎಂಬುದು ಇದರ ಅರ್ಥ. ತಿರುವಾಂಕೂರು ಪ್ರದೇಶಕ್ಕೆ ಸೇರಿದ ಮನೆಗಳಲ್ಲಿ ಇರುವವರನ್ನು 'ಕುಡಿಕ್ಕಾರ'ರೆಂಬ ಹೆಸರಿನಿಂದ ಕರೆಯುತ್ತಾರೆ. 'ದೊಗಾಮ' ಹಾಗೂ 'ಸಾನಿ'ಗಳೆಂಬ ಹೆಸರು ಆಂಧ್ರಪ್ರದೇಶದಲ್ಲಿದ್ದು, ಕನ್ನಡ ಮಾತಾಡುವ ಪ್ರದೇಶಗಳಲ್ಲಿ 'ಬಸವಿ' ಮತ್ತು 'ಜೋಗತಿ'ಯರೆಂಬ ಹೆಸರುಗಳಿವೆ. ಗೋವಾ ಹಾಗೂ ಪಶ್ಚಿಮ ಭಾರತದ ಪ್ರದೇಶಗಳಲ್ಲಿ 'ಸುಂದರ ವ್ಯಭಿಚಾರಿಣಿಯರು' ಎಂಬ ಅರ್ಥಕೊಡುವ 'ಭವಿನ್ಸ್' ಅಥವಾ 'ಭವಿನಿಸ್' ಎಂಬ ಹೆಸರುಗಳು ಪ್ರಚಲಿತವಾಗಿವೆ. ಮಹಾರಾಷ್ಟ್ರಗಳಲ್ಲಿ (ಕರಾವಳಿ ಪ್ರದೇಶಗಳನ್ನು ಬಿಟ್ಟು) ಇವರನ್ನು 'ಮುರಳಿ', 'ಜೋಗತಿಸ್', 'ಜೋಗತಿನಿಸ್' ಹಾಗೂ 'ಆರಾಧಿನಿಸ್' ಎಂದು ಕರೆಯಲಾಗುತ್ತದೆ". (ಡಾ. ಎಚ್.ಎಸ್.ಶ್ರೀಮತಿ, ೧೯೯೪, ಪುಟ ೪೬೮)

ಇಲ್ಲಿ ಮೇಲಿನ ಪದಗಳಿಗೆ ವಿವರಣೆ ನೀಡಬೇಕಾಗುತ್ತದೆ. ಈ ಪದಗಳು ಒಂದು ದೃಷ್ಟಿಯಿಂದ ಸಮಾನತೆ ಹೊಂದಿದ್ದರೂ, ಮೂಲತಃ ಅವು ಬೇರೆ ಬೇರೆ ಕಾರಣಗಳಿಂದ ಹುಟ್ಟಿಕೊಂಡವುಗಳು. ದೇವದಾಸಿಯರು ದೇವಾಲಯಗಳಲ್ಲಿ ದೇವರ ಸೇವೆಗಾಗಿ ನಿಯುಕ್ತಿಗೊಂಡವರು. "ಒಂದೆ ದೇವಾಲಯವು ಪ್ರಬಲ ಸಾಮಾಜಿಕ ಸಂಸ್ಥೆಯಾಗಿದ್ದಾಗ ರಾಜನಿಗೆ ಸಲ್ಲುತ್ತಿದ್ದ ಮರ್ಯಾದೆಗಳೆಲ್ಲ ದೇವರಿಗೂ ಸಲ್ಲುತ್ತಿದ್ದವು. ಅವುಗಳಲ್ಲಿ ಗಾಯನ, ನರ್ತನ, ಆರತಿ ಸೇವೆ ಮತ್ತು ಚಾಮರ ಸೇವೆಗಳಿಂದ ಕೂಡಿದ್ದ ರಂಗಭೋಗವು ಒಂದು. ಈ ಸೇವಾ ಕಾರ್ಯಗಳನ್ನು ನಡೆಸಿಕೊಂಡು ನಿಯಮಕಗೊಳ್ಳುತ್ತಿದ್ದ ಸ್ತ್ರೀಯರೇ ದೇವದಾಸಿಯರು. ನಂತರ ಇವರನ್ನು ಪಾತ್ರದವರೆಂದು, ಸೂಳೆಯರೆಂದು ಕರೆಯಲಾಗಿದೆ".(ಸಂ. ಚಂದ್ರಶೇಖರ ಕಂಬಾರ, ೧೯೮೫, ಪುಟ ೧೦೬೧) ಇವರ ಮಾತಿನಲ್ಲಿ ದೇವದಾಸಿಯರಿಗೆ ದೇವಾಲಯದಲ್ಲಿರುವ ಮಹತ್ವವನ್ನು ಗಮನಿಸಬಹುದು. ಇವರ ಸೇವೆ ನಿರ್ದಿಷ್ಟಪಡಿಸಿದ ದೇವಾಲಯಕ್ಕಷ್ಟೇ ಸೀಮಿತವಾದದು. ಇವರು ದೇವರೊಂದಿಗೆ ಮದುವೆಯಾಗಿರುವುದರಿಂದ ಜೀವನಪರ್ಯಂತ ಯಾವ ಗಂಡಸನ್ನೂ ಮದುವೆಯಾಗುವ ಹಾಗಿಲ್ಲ. ದೇವಸ್ಥಾನದ ಎಲ್ಲ ಧಾರ್ಮಿಕ ಕ್ರಿಯೆಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದ ಇವರಿಗೆ ದೇವಾಲಯದಲ್ಲಿ ಸುಕನಾಸಿನಿಯವರೆಗೆ ಬರಲು ಅಧಿಕಾರ ಇರುತ್ತಿತ್ತು. ಇವರು ದೇವಸ್ಥಾನದ

ಆಡಳಿತ ವರ್ಗಕ್ಕೆ ಸಂಬಂಧಿಸಿದವರಾಗಿದ್ದು ದೇವಾಲಯದಲ್ಲಿ ಸೇವೆ ಸಲ್ಲಿಸುವ ಅಧಿಕಾರವನ್ನು ಪಾರಂಪರಿಕವಾಗಿ ಹೊಂದಿರುತ್ತಿದ್ದರು. ಇವರು ಧರ್ಮ ಪ್ರಸಾರಕರಲ್ಲ. ಅಥವಾ ಧಾರ್ಮಿಕ ಬಿಕ್ಷುಗಳೂ ಅಲ್ಲ. ತಮ್ಮನ್ನು ಇಟ್ಟುಕೊಂಡವನ ಜೊತೆಗೆ ವ್ಯವಸ್ಥಿತವಾದ ಬದುಕನ್ನು ರೂಪಿಸಿಕೊಂಡವರು. ನೃತ್ಯ ಗಾಯನಾದಿಗಳಲ್ಲಿ ಕುಶಲರಾಗಿರುವುದರಿಂದ ಇವರನ್ನು 'ಕಲಾವಂತರು' ಎಂದೂ ಕರೆಯುತ್ತಿದ್ದರು. ಊರಿನ ಸಾಮಾಜಿಕ ಮತ್ತು ಧಾರ್ಮಿಕ ಕ್ರಿಯಾಚರಣೆಗಳಲಲ್ಲಿ ಇವರಿಗೆ ಗೌರವದ ಸ್ಥಾನವಿತ್ತು.

ದೇವಾಲಯದ ನೃತ್ಯ ಸಂಗೀತಾದಿ ಸೇವೆಯನ್ನು ನಿರ್ವಹಿಸುವ ಇವರನ್ನು ನಟುವರು, ಪಾತರದವರು ಎಂದೂ ಗುರುತಿಸುವರು. "ಉತ್ತರ ಭಾರತದಲ್ಲಿ ಪತರ್‌ದವರು ತೆಲುಗಿನಲ್ಲಿ ಭೋಗಮ್‌ಗಳು ಎಂದು ಈ ಜನಾಂಗವನ್ನು ಗುರುತಿಸುವರು. ಕರ್ನಾಟಕದಲ್ಲಿ ಇವರನ್ನು ಕಲಾವಂತರು, ಸಾನಿಯರು ಎಂದೂ ಗುರುತಿಸುವರು. ಮೈಸೂರಿನಲ್ಲಿ ನಾಯಕ ಸಾನಿ ಎಂದು ಗುರುತಿಸುವರು". (ಡಾ. ಶೈಲಜಾ ಹಿರೇಮಠ, ೧೯೯೯, ಪು. ೧೮). ಇವರು ದೇವರೆದುರಿಗೆ ನೃತ್ಯ ಸಂಗೀತಾದಿಗಳ ಸೇವೆಯಲ್ಲಿ ಭಾಗವಹಿಸುವುದರಿಂದ ಕಲೆಯ ಹಿನ್ನೆಲೆಯಲ್ಲಿ ಗುರುತಿಸಿರುವುದು ಕಂಡುಬರುತ್ತದೆ. 'ಪಾತರ' ಎಂದರೆ ಕುಣಿತ, ನರ್ತನ, ನಾಟ್ಯ. 'ಪಾತರದವರು' ಎಂದರೆ ನಾಟ್ಯ ಮಾಡುವ ವೃತ್ತಿಯವರು (ಕನ್ನಡ ನಿಘಂಟು) ಎನ್ನುವ ವಿವರಣೆಯಿದೆ.

ಒಟ್ಟಿನಲ್ಲಿ ದೇವದಾಸಿಯರು ಮತ್ತು ಪಾತರದವರ ವೃತ್ತಿಯು ಒಂದೇ ರೂಪವನ್ನು ಹೊಂದಿದ್ದರೂ ಪ್ರಾದೇಶಿಕವಾಗಿ ಇವರನ್ನು ವಿಭಿನ್ನ ರೀತಿಯಲ್ಲಿ ಗುರುತಿಸಿಕೊಳ್ಳುತ್ತಿದ್ದುದು ಕಂಡುಬರುತ್ತದೆ. ದೇವರ ಸೇವೆಗಾಗಿ ನೇಮಕಗೊಂಡ ದೇವದಾಸಿಯರು ಒಂದು ವರ್ಗವಾದರೆ ದೇವರಿಗೆ ಅರ್ಪಣೆಗೊಂಡ ದೇವದಾಸಿಯರದು ಇನ್ನೊಂದು ವರ್ಗ. ಇವರನ್ನು "ಜೋಗತಿ, ಬಸವಿ, ಸೂಳೆ, ದಾಸಿ, ಗುಡ್ಡಿ ಎಂಬ ನಾಮಾಂಕಿತದಿಂದಲೇ ನಿರ್ದೇಶಿಸುತ್ತಾರೆ. ಇವರಿಗೆ ದೇವರೇ ಗಂಡ. ಇವರು ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಕಂಡುಬರುತ್ತಾರೆ. ದುರ್ಗಮ್ಮ, ಮಂಟೇಸ್ವಾಮಿ, ಬಿಳಿಗಿರಿರಂಗ ನಂಜುಂಡೇಶ್ವರ, ಹೀಗೆ ಹತ್ತಾರು ದೇವರಿಗೆ ಬಸವಿ ಬಿಡುವ ಪದ್ಧತಿ ಇದೆ. ಎಲ್ಲಮ್ಮನ ಭಕ್ತರನ್ನು ಜೋಗತಿ ಎಂದರೆ ವಿಷ್ಣು ಭಕ್ತರಿಗೆ ದಾಸಿ ಎಂದೂ, ಶಿವಭಕ್ತರಿಗೆ ಗುಡ್ಡಿ ಎಂದೂ ಕರೆಯುತ್ತಾರೆ". (ಸಂಕೇತ ಎಂ.ಬಿ, ೧೯೮೭, ಪುಟ ೧೫೫). ದೇವದಾಸಿ ಸಂಪ್ರದಾಯಕ್ಕೂ ಎಲ್ಲಮ್ಮನ ಸೇವೆಗೆ ಅರ್ಪಿತವಾದ ಜೋಗತಿಯರಿಗೂ ಮೂಲಭೂತವಾದ ವ್ಯತ್ಯಾಸವಿದೆ. ಇವರಿಗೆ ದೇವಾಲಯದಲ್ಲಿ ಯಾವುದೇ ರೀತಿಯ ಪ್ರಾಮುಖ್ಯತೆ ಮತ್ತು ನಿರ್ಬಂಧವೂ ಇಲ್ಲ. ಇವರು ಎಲ್ಲಮ್ಮನ ಮಹಿಮೆಗಳನ್ನು ಕೊಂಡಾಡುತ್ತ, ಧಾರ್ಮಿಕ ಭಿಕ್ಷಾಟನೆ ಮಾಡುತ್ತಾರೆ. ಎಲ್ಲಮ್ಮನ ಸೇವಕಿಯರಲ್ಲಿ ದೇವದಾಸಿಯರ ಯಾವ ಗುಣಗಳೂ ಕಂಡುಬರುವುದಿಲ್ಲ. ಹನುಮಾಕ್ಷಿ ಗೋಗಿಯವರು "ದೇವದಾಸಿಯರು ಮಾಡುವ ಸಂಗೀತ ನರ್ತನಗಳ ಗಂಧವೂ ಇವರಿಗಿಲ್ಲ. ಅದಕ್ಕಾಗಿ ಕಂಕಣ ಬದ್ಧರಾದವರೂ ಅಲ್ಲ. ಹೀಗಾಗಿ ಇವರನ್ನು ದೇವದಾಸಿಯರು ಎಂದು ಎಲ್ಲೂ ಕರೆದಿಲ್ಲ, ಕರೆಯಲೂ ಬಾರದು" (೧೯೭೮, ಪುಟ

೧೪೦) ಎಂದು ಅಭಿಪ್ರಾಯ ಪಡುತ್ತಾರೆ. ಇವರ ಈ ಹೇಳಿಕೆಯನ್ನು ಗಮನಿಸಿದಾಗ ದೇವದಾಸಿಯರಿಗೂ ಮತ್ತು ಜೋಗತಿಯರಿಗೂ ಇರುವ ವ್ಯತ್ಯಾಸದ ಅರಿವಾಗುತ್ತದೆ. ದೇವರನ್ನೇ ಗಂಡನೆನ್ನುವ ಇವರು ತಮ್ಮನ್ನು ಬಯಸಿದವನೊಂದಿಗೆ ಜೀವಿಸುತ್ತಾರೆ.

ಈ ಸಂಪ್ರದಾಯದಲ್ಲಿ ಭಕ್ತಿಗೆ ಪ್ರಾಧಾನ್ಯತೆ ಇದ್ದರೂ ಕಾಲಾಂತರದಲ್ಲಿ ಹೊಟ್ಟೆಪಾಡಿನ ಹೆಸರಿನಲ್ಲಿ ಕೀಳು ಅಭಿರುಚಿಯನ್ನು ಬೆಳೆಸಿಕೊಂಡು ಬಂದಿರುವುದು ದುರದುಷ್ಟಕರ ಸಂಗತಿ. ಎಲ್ಲಮ್ಮನ ಭಕ್ತರ ಮನೆ ಮನೆಗೆ ಹೋಗಿ ಧರ್ಮ ಪ್ರಚಾರ ಮಾಡುವ ಜೋಗತಿಯರನ್ನು ಕಡತೋಟದ ಎನ್.ಕೆ. ಅವರು ಮೂರು ವಿಧವಾಗಿ ವಿಂಗಡಿಸುತ್ತಾರೆ. ೧. ಕೊಡಹೊತ್ತವರು ೨. ಪಡಲಗಿ ಹೊತ್ತವರು ೩. ಜಗಹೊತ್ತವರು (೧೯೮೩, ಪುಟ ೧೩). ಇವರೆಲ್ಲರ ಮೂಲ ಉದ್ದೇಶ ಧರ್ಮಪ್ರಚಾರ ಮತ್ತು ಭಿಕ್ಷಾಟನೆ. ಇವರು ಅರಷಿಣ ಪುಡಿಯನ್ನು ಭಂಡಾರವೆಂದು ಹೇಳಿ ಜನರ ಹಣೆಗೆ ಹಚ್ಚಿ ಭಿಕ್ಷೆ ಬೇಡುತ್ತಾರೆ.

ಒಟ್ಟಿನಲ್ಲಿ ಇವರೆಲ್ಲ ವೃತ್ತಿ ಸಂಬಂಧವಾಗಿ ಬೇರೆ ಬೇರೆ ಹೆಸರಿನಿಂದ ಗುರುತಿಸಿಕೊಂಡರೂ ಇವರು ಧಾರ್ಮಿಕ ಆಶಯ ಹೊಂದಿದವರು. ಎಲ್ಲರ ಕೇಂದ್ರ ಬಿಂದು ದೇವರೇ. ದೇವರನ್ನೇ ಗಂಡನೆನ್ನುವ ಹೆಣ್ಣು ತನ್ನ ದೈಹಿಕ ತೃಪ್ತಿಗಾಗಿ ಪರಪುರುಷನ ತೃಪ್ತಿ ಮಾಡುವುದು ಸಹಜವಾದುದೇ. ಯಾವುದೇ ಒಂದು ಆಚರಣೆಯ ಹುಟ್ಟಿನ ಆಶಯ ಸದುದ್ದೇಶ ಹೊಂದಿದ್ದರೂ, ನಾಗರಿಕತೆಯ ಬೆಳವಣಿಗೆಯಲ್ಲಿ ಅದು ಬೇರೆ ರೂಪ ಪಡೆದುಕೊಳ್ಳುತ್ತದೆ. ಪ್ರಸ್ತುತ ಅಧ್ಯಯನ ಕೇಂದ್ರವಾದ ಬಸ್ರೂರಿನ ದೇವದಾಸಿಯರನ್ನು ರೂಢಿಯಲ್ಲಿ 'ನಾಯಕ ಸಾನಿ' ಎಂದು ಕರೆಯಲಾಗುತ್ತಿತ್ತು. ಇಂದಿನ ಸಮಾಜದಲ್ಲಿ ಈ ಮನೆತನಗಳವರು 'ಕಲಾವಂತ ಸಮಾಜ' ಎಂದು ಗುರುತಿಸಿಕೊಂಡಿದ್ದಾರೆ. ಅವರ ಕಲೆಯ ಬದುಕಿಗೆ 'ಕಲಾವಂತ' ಎಂಬ ಅನ್ವರ್ಥನಾಮವು ತುಂಬ ಮಹತ್ವದ್ದಾಗಿದೆ.

## ೩.೩ ಐತಿಹಾಸಿಕ ಹಿನ್ನೆಲೆ

ದೇವದಾಸಿ ಪದ್ಧತಿ ಅಥವಾ ಧಾರ್ಮಿಕ ವೇಶ್ಯಾಗಾರಿಕೆಯ ಇತಿಹಾಸವನ್ನು ಈ ಭಾಗದಲ್ಲಿ ಸಂಕ್ಷಿಪ್ತವಾಗಿ ಕೊಡಲಾಗಿದೆ. ಭಾರತವನ್ನು ಹೊರತುಪಡಿಸಿ ಇತರ ದೇಶಗಳಲ್ಲಿಯ ಪ್ರಾಚೀನ ನಾಗರಿಕತೆಗಳಲ್ಲಿ ಈ ಪದ್ಧತಿಯ ಇತಿಹಾಸವನ್ನು ಕೂಡ ಚರ್ಚಿಸಲಾಗಿದೆ. ಅಧ್ಯಯನಕ್ಕೆ ಸಹಾಯಕವಾಗುವಂತೆ ಇತರ ಸಾಹಿತ್ಯ ಗ್ರಂಥಗಳನ್ನೇ ಆಧಾರವಾಗಿ ಬಳಸಿಕೊಳ್ಳಲಾಗಿದೆ.

ಧಾರ್ಮಿಕ ಶ್ರದ್ಧೆ ಮತ್ತು 'ಮಾತೃ ದೇವತಾ' ಆರಾಧನೆಯ ಹಿನ್ನೆಲೆಯಲ್ಲಿ ಈ ಪದ್ಧತಿಯು ಉಗಮವಾಗಿರುವದು ಕಂಡು ಬರುತ್ತದೆ. ಫಲವತ್ತತೆಯ ಹಿನ್ನೆಲೆಯಲ್ಲಿ ಪ್ರಕೃತಿಯನ್ನು ಪೂಜಿಸತೊಡಗಿದ ಆದಿ

ಮಾನವನು ಜನ್ಮ ನೀಡುವ ಜನನಿಗೂ 'ಶಕ್ತಿ'ಯ ಸ್ವರೂಪವನ್ನು ಕಲ್ಪಿಸಿಕೊಂಡ. ಭೂಮಿ ಎಲ್ಲಾ ಸೃಷ್ಟಿ ಕ್ರಿಯೆಗೆ ಮೂಲ ಆಧಾರವಾಗಿರುವಂತೆ ಹೆಣ್ಣು ಮನುಷ್ಯ ಸಮಾಜಕ್ಕೆ ಸೃಷ್ಟಿಗೆ ಮೂಲ ಮತ್ತು ಆಧಾರವಾಗಿದೆ. ಹೆಣ್ಣಿನ ಗರ್ಭಧರಿಸುವಿಕೆ ಮತ್ತು ಭೂಮಿಯ ಸಸ್ಯಧಾರಣೆ ಇವೆರಡಕ್ಕೂ ಸಾಮ್ಯತೆಯನ್ನು ಕಂಡುಕೊಂಡ ಆದಿ ಮಾನವ ಹೆಣ್ಣು ಮತ್ತು ಭೂಮಿಗಳೆರಡೂ ಪೂಜ್ಯ ವಸ್ತುಗಳೆಂದು ಭಾವಿಸಿದ. "ಭೂಮಿಯನ್ನು ಸ್ತ್ರೀಯರೊಡನೆ ಹೋಲಿಸುವುದನ್ನು ಸಂಸ್ಕೃತಿಯ ಬೇರೆ ಬೇರೆ ಹಂತದ ಚಿಂತನೆಯಲ್ಲಿ ಕಾಣಬಹುದು. ರೋಮನ್ ಕಾನೂನಿನ ಪ್ರಕಾರ ತಾಯಿ ಮತ್ತು ಮಣ್ಣು ಸಮಾನರು. ಪ್ರಾಚೀನ ಭಾರತದಲ್ಲಿ ಮದುವೆಯ ಆಚರಣೆಯಲ್ಲಿ ಸ್ತ್ರೀಯನ್ನು ಬೀಜ ಬಿತ್ತುವ ಹೊಲವೆಂದು ಕರೆಯಲಾಗುತ್ತಿತ್ತು. ಮತ್ತು ಅರ್ಚಕನು ಮದುಮಗನಿಗೆ 'ಅವಳ ಮೇಲೆ ನಿನ್ನ ಬೀಜವನ್ನು ಬಿತ್ತು' ಎಂದು ಹಾರೈಸುತ್ತಿದ್ದನು. ಖುರಾನಿನ ಪ್ರಕಾರ 'ನಿಮ್ಮ ಹೆಂಗಸರು ನಿಮ್ಮ ಹೊಲ', ತಾಯಿಯ ಗರ್ಭ ಒಂದು ವಸ್ತುವಿನ ಎರಡು ರೂಪಗಳಾಗಿವೆ. ಬೆತ್ತಲೆಯಾಗಿ ನಾನು ತಾಯಿಯ ಗರ್ಭದಿಂದ ಬಂದೆ. ಬೆತ್ತಲೆಯಾಗಿ ನಾನು ಅದಕ್ಕ ಹಿಂದಿರುಗುವೆ" ಎಂದು ಬೈಬಲ್‌ನಲ್ಲಿ ಹೇಳಲಾಗಿದೆ. (ಡಾ. ಸಿದ್ಧಲಿಂಗಯ್ಯ, ೧೯೯೭, ಪುಟ ೩೦).

ಹೀಗೆ ಭೂಮಿಯೊಂದಿಗೆ ಹೋಲಿಸಿಕೊಂಡ ಹೆಣ್ಣು ಮಾತೃದೇವತೆಯಾಗಿ ಆರಾಧಿಸಲ್ಪಟ್ಟು ದೇವತೆಯ ಸ್ಥಾನಕ್ಕೆ ಏರಿದಳು.

ಸೆಮೆಟಿಕ್ ಜನಾಂಗಗಳಲ್ಲಿ ಬೆಳೆದ 'ಅಷ್ಟಾರ್ಟ್' ದೇವತೆಯ ಕಲ್ಪನೆ, ಈಜಿಪ್ಟ್‌ನಲ್ಲಿ ರೂಪುಗೊಂಡ 'ಇಸಿಸ್' ದೇವತೆಯ ಕಲ್ಪನೆ, ಫ್ರಿಜಿಯಲ್ಲಿ 'ಸಿಬಿಲೇ' ದೇವತೆಯ ಕಲ್ಪನೆ ಭಾರತದ ಶಕ್ತಿ ದೇವತೆಯ ಕಲ್ಪನೆಗೆ ಸಮಾನ ಪರಿಕಲ್ಪನೆಗಳಾಗಿವೆ. ಮಾತೃಪ್ರಧಾನ ವ್ಯವಸ್ಥೆಯು ಪ್ರಪಂಚದ ಯಾವುದೇ ಭಾಗಕ್ಕಿಂತ ಗುಣ ಮತ್ತು ಪ್ರಮಾಣ ಎರಡರಲ್ಲೂ ಭಾರತ ದೇಶದಲ್ಲಿ ವಿಪುಲವಾಗಿತ್ತೆಂದು ವಿದ್ವಾಂಸರು ಭಾವಿಸುತ್ತಾರೆ. (ಡಾ. ಸಿದ್ಧಲಿಂಗಯ್ಯ, ೧೯೯೭, ಪುಟ ೧೬ - ೧೭).

ಈ ರೀತಿ ಮಾತೃದೇವತೆಯ ಆರಾಧನೆ ಮತ್ತು ಫಲವತ್ತತೆ ಹಿನ್ನೆಲೆಯಲ್ಲಿ ಹೆಣ್ಣನ್ನು ದೇವರಿಗೆ ಅರ್ಪಿಸುವ ಪದ್ಧತಿಯು ಬೆಳೆದು ಬಂದಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

"ಸರ್ ಜೇಮ್ಸ್ ಫ್ರೇಜರ್ ಅವರು ನಿಸರ್ಗದ ಎಲ್ಲ ಪುನರುತ್ಪತ್ತಿ ಶಕ್ತಿಗಳ ಫಲವತ್ತತೆಯ ತತ್ವದ ಮೂರ್ತೀಕರಣಗೊಂಡ ಮಾತೃದೇವತೆಯ ಆರಾಧನೆಯ ಜೊತೆಗೆ ಈ ಸಂಪ್ರದಾಯದ ಸಂಬಂಧವನ್ನು ಗುರುತಿಸುತ್ತಾರೆ. ನಿಸರ್ಗವನ್ನು ಸಮೃದ್ಧಗೊಳಿಸುವ ಅವಳು ಸ್ವತಃ ಫಲವತ್ತಳಾಗಿರಬೇಕು. ಮತ್ತು ಆ ಕಾರಣಕ್ಕಾಗಿ ಒಬ್ಬ ಸಂಗಾತಿಯಿರಬೇಕು ಎನ್ನುವ ತತ್ವದ ಆಧಾರದ ಮೇಲೆ ಈ ಮಾತು ರೂಪುಗೊಂಡಿತು. ಭೂಮಿಯ ಪ್ರಾಣಿಗಳ

ಮತ್ತು ಮಾನವ ಕುಲದ ಫಲ ಸಮೃದ್ಧಿಯ ಉತ್ತೇಜನ, ದಿವ್ಯಲಗ್ನ ಅಥವಾ ದೈವೀ ವಿವಾಹದ ಉದ್ದೇಶವಾಗಿದ್ದು, ಈ ಉದ್ದೇಶ ಸಾಧನೆಗಾಗಿ ಪ್ರತಿ ವರ್ಷ ಪವಿತ್ರ ಉತ್ಸವಗಳ ಆಚರಣೆ ಅತ್ಯಗತ್ಯ ಎಂದು ಭಾವಿಸಲಾಯಿತು. ಇಂಥ ಆಚರಣೆಗಳಲ್ಲಿ ಮದುಮಗಳು ಮತ್ತು ಮದುಮಗನ ಪಾತ್ರವನ್ನು, ವಿಗ್ರಹ ಅಥವಾ ಜೀವಂತ ವ್ಯಕ್ತಿಗಳು ವಹಿಸಬೇಕಾಗುತ್ತಿತ್ತು" (ಪ್ರಭಾಮಹಾಲೆ, ೧೯೮೭, ಪುಟ ೧೨೩ - ೧೨೪).

ಈ ಹಿನ್ನೆಲೆಯಲ್ಲಿ ಧಾರ್ಮಿಕ ವೇಶ್ಯಾ ವೃತ್ತಿಯು ದೇವಾಲಯಗಳಿಗೆ ಸಂಬಂಧಿಸಿದಂತೆ ರೂಢಿಯಲ್ಲಿ ಬಂದಿತು. "ದೇವರಿಗೆ ಅರ್ಪಿಸಿಕೊಂಡ ಗಂಡು ಹೆಣ್ಣು ಸಂಪ್ರದಾಯದ ಬಲದಿಂದಾಗಿ ತಮ್ಮನ್ನು ತಾವು ಸೂಳೆಗಾರಿಕೆಯ ಆಚರಣೆಯಲ್ಲಿ ತೊಡಗಿಸಿಕೊಂಡರು. ಮೀಸಲಾದ ಗಂಡು ಹೆಣ್ಣು ದೇವತೆಯ ಪ್ರತಿನಿಧಿ, ಇವರ 'ಸಂಭೋಗ' ಮಾತೃದೇವತೆಯ ಮನ್ನಣೆ ಪಡೆದ ನಡವಳಿಕೆಯ ಸಂಕೇತ ಮತ್ತು ಜನಾಂಗ ಸಮೃದ್ಧಿಗೆ ನಿಶ್ಚಿತ ಪ್ರೇರಕ ಎಂಬ ಮುಂತಾದ ನಂಬಿಕೆಗಳು ಬೆಳೆದು ಬಂದವು. 'ಪುರುಷ ದೇವತೆ'ಗೆ ಮೀಸಲಾದ 'ದಾಸಿ'ಯರು ಸೂಳೆಯರಾಗಿ ಪರಿವರ್ತನೆಗೊಂಡರು. ಈ ಆಚರಣೆಯನ್ನು ಕೇವಲ ವಿಷಯ ಭೋಗವೆಂದು ಭಾವಿಸದೆ ದೇವತೆಯ ಸೇವೆಗಾಗಿ ಮಾಡುವ ಕರ್ತವ್ಯ ಎನ್ನುವ ಭಾವನೆ ಇಲ್ಲಿ ಹುದುಗಿರುವುದು ಸ್ಪಷ್ಟ. ಇಂಥ ವೇಶ್ಯೆಯರ ಜೊತೆಯ ಭೋಗ ಒಂದು ವ್ಯಕ್ತಿಗತ ಲಾಲಸೆ ಎಂದುಕೊಳ್ಳದೆ ಮಾತೃದೇವತೆಯ ಜೊತೆಗೆ ನಿಕಟ ಸಂಪರ್ಕ ಹೊಂದುವ ಸಾಧನೆ ಎಂದು ಭಾವಿಸಲಾಗುತ್ತದೆ." (ಪ್ರಭಾಮಹಾಲೆ, ೧೯೮೭, ಪುಟ ೧೨೬).

ಅತಿ ಪ್ರಾಚೀನವಾದ ಈ 'ಮಾತೃ ದೇವತಾ' ಕಲ್ಪನೆ ಜಗತ್ತಿನ ಬೇರೆ ಬೇರೆ ನಾಗರಿಕತೆಗಳಲ್ಲಿ ಪ್ರಚಲಿತವಿದ್ದ ಬಗ್ಗೆ ಮಾಹಿತಿ ದೊರೆಯುತ್ತದೆ. "ಪ್ರಾಚೀನ ಬೆಬಿಲೋನಿಯ, ಸೈಪ್ರಸ್ , ಫಿನೀಪಿಯ, ಗ್ರೀಸ್ , ಮೆಸಪ ಟೋಮಿಯಾ, ಈಜಿಪ್ಟ್ , ಸಿರಿಯ, ಅರೇಬಿಯ ಮುಂತಾದ ಮಧ್ಯ ಪ್ರಾಚ್ಯ ದೇಶಗಳಲ್ಲಿ ಮತ್ತು ಆಗ್ನೇಯ ಏಷ್ಯದಲ್ಲಿ ಈ ಪದ್ಧತಿ ರೂಢಿಯಲ್ಲಿತ್ತು......ಮೊಹೊಂಜೊದಾರೊ ಸಂಸ್ಕೃತಿಯ ಮಾತೃ ದೇವತೆಯ ಅಥವಾ ಸಂತಾನ ದೇವತೆಯ ಗುಡಿಯಲ್ಲಿ ಪುರುಷರು ಹಾಗೂ ಸ್ತ್ರೀಯರು ಗುಲಾಮರಾಗಿರುತ್ತಿದ್ದರೆಂದೂ, ಅವರಲ್ಲಿ ಅನೇಕರು ದೇವದಾಸಿಯರೆಂದೂ, ಅವರು ಗೃಹಣಿಯಾರಾಗುವ ಮುನ್ನ ಸ್ವಲ್ಪ ಕಾಲವಾದರೂ ಮಾತೃದೇವತಾ ಮಂದಿರದಲ್ಲಿ ದೇವದಾಸಿಯರಾಗಿರುವುದು ಗೌರವ ಪ್ರತಿಷ್ಠೆಯ ಮತ್ತು ಮಾತಾ/ತ್ತೆಂದು ತಿಳಿದು ಬರುತ್ತದೆ. (ಕನ್ನಡ ವಿಶ್ವಕೋಶ. ಸಂ. ೯. ಪುಟ - ೭೧೭) ಸಿಂಧೂ ನಾಗರಿಕತೆಯ 'ಹರಪ್ಪ' ಮತ್ತು 'ಮೊಹಂಜೊದಾರೋಗಳ' ಸುತ್ತ ಮತ್ತ ಇದಕ್ಕೆ ಸಂಬಂಧಿಸಿದ ಆಧಾರಗಳು ದೊರಕಿವೆ.

"ಸಿಂಧೂ ಬಯಲಿನ ಅನೇಕ ಸ್ಥಳಗಳಲ್ಲಿ ಮಹಿಳೆಯರ 'ಟೆರ್ರಾಕೊಟಾ'ಗಳು (ಮಣ್ಣಿನಿಂದ ಮಾಡಿದ ನಂತರ ಸುಟ್ಟ ಫಲಕಗಳು) ಬಹು ದೊಡ್ಡ ಪ್ರಮಾಣದಲ್ಲಿ ದೊರಕಿವೆ. ನೀಳ ಕೇಶ ವಿನ್ಯಾಸದೊಂದಿಗೆ ಈ ಶಿಲ್ಪಗಳು ಬೆತ್ತಲೆ ಅಥವಾ ಅರೆ ಬೆತ್ತಲೆಯಾಗಿವೆ. ಈ ಬಗೆಯ ಮಾತೃ ದೇವತೆಯ ಮೂರ್ತಿ ಪ್ರತಿಯೊಂದು ಕುಟುಂಬದಲ್ಲೂ

ಇತ್ತು ಎಂದು ಭಾವಿಸಲಾಗಿದೆ. (ಜೋಗನ್ ಶಂಕರ್ . ೧೯೯೩, ಪುಟ - ೫೧).

ವೇದಗಳಲ್ಲಿ ಸಾಮಾನ್ಯ ವೇಶ್ಯಾಗಾರಿಕೆಯ ಬಗ್ಗೆ ಕೆಲವು ಉಲ್ಲೇಖಗಳಿವೆ. ಆದರೆ ದೇವಾಲಯದ ನರ್ತಕಿಯರ ಬಗ್ಗೆ ಎಲ್ಲೂ ಉಲ್ಲೇಖ ಕಂಡುಬರುವುದಿಲ್ಲ. "ಭರತ ಖಂಡದಲ್ಲಿ ಸ್ತ್ರೀಯರನ್ನು ಸ್ವೀಯ, ಪರಕೀಯ, ಸಾಧಾರಣ ಎಂದು ವಿಭಾಗಿಸಿ, ಸಾಧಾರಣ ಸ್ತ್ರೀಯರಲ್ಲಿ ಗಣಿಕಾ, ವೇಶ್ಯಾ, ಕುಟ್ಟನೀ ಕುಂಭದಾಸಿ, ಮುಂತಾದ ಭೇದಗಳಿದ್ದವು. ಸಾಧಾರಣಾ, ಜಾರಾ, ನಟೀ ಎಂಬ ಪದಗಳು ಋಗ್ವೇದದಲ್ಲಿಯೇ ಕಂಡು ಬರುವುದು. ( ಶ್ರೀಕಂಠ ಶಾಸ್ತ್ರಿ. ೧೯೫೪, ಪುಟ - ೧೭೭) ಚಾಣಕ್ಯನಿಂದ ಬರೆಯಲ್ಪಟ್ಟ ಐತಿಹಾಸಿಕ ಸಾಹಿತ್ಯ ಕೃತಿ 'ಅರ್ಥಶಾಸ್ತ್ರ'ದಲ್ಲಿ ಗಣಿಕೆಯರ ಉಲ್ಲೇಖ ಕಂಡುಬರುತ್ತದೆ. 'ಪಟ್ಟಣಗಳಲ್ಲಿರುವ ವೇಶ್ಯೆಯರನ್ನು ಗಣಿಕೆಯರೆಂದು ಕರೆಯುತ್ತಿದ್ದರು. ಗಣಿಕೆಯರು ವಿಶೇಷ ಸಂಖ್ಯೆಯಲ್ಲಿ ಪಟ್ಟಣದ ಮುಖ್ಯ ಭಾಗಗಳಲ್ಲಿಯೂ ಅರಮನೆ ಅಂತ:ಪುರಗಳಲ್ಲಿಯೂ ವಾಸಿಸುತ್ತಿದ್ದರು. ಕೌಟಿಲ್ಲಿನ ಕಾಲದಲ್ಲಿ ವೇಶ್ಯಾವೃತ್ತಿಯು ಅಷ್ಟೊಂದು ದೂಷ್ಯವೆನಿಸಿಕೊಂಡಿರಲಿಲ್ಲ.....ನರ್ತಕಿಯರು ಎಂಟನೆಯ ವರ್ಷದಿಂದಲೇ ನೃತ್ಯಾ ಕಲಾಭ್ಯಾಸ ಮಾಡಿ ರಾಜನ ಮುಂದೆ ಅಭಿನಯಿಸುತ್ತಿದ್ದರು. ( ಪ್ರೊ. ಜಿ.ಜಿ. ಜೋಶಿ. ೧೯೯೧)

ಭಾರತದ ಧಾರ್ಮಿಕ ಸಂಪ್ರದಾಯದಲ್ಲಿ ದೇವಾಲಯದ ನರ್ತಕಿಯರ ಉಲ್ಲೇಖವು ಸುಮಾರು ಮೂರನೇ ಶತಮಾನದಿಂದಲೇ ಕಂಡುಬರುತ್ತದೆ. "ಉಜ್ಜಯನಿಯ ಮಹಾಕಾಲ ದೇವಸ್ಥಾನದಲ್ಲಿ ನರ್ತಕಿಯರಿದ್ದ ವಿಷಯವನ್ನು ಕಾಳಿದಾಸನು ನಿರೂಪಿಸುತ್ತಾನೆ. (ಮೇಘಧೂತ ೧.೩೫).....ಈ ಸಂಪ್ರದಾಯವು ಆರನೆಯ ಶತಮಾನದಲ್ಲಿ ಹೆಚ್ಚಾಗಿ ಹರಡಿರಬೇಕು. ಹೂಯೆನ್ ತ್ಸಾಂಗನು (೭ನೇ ಶತಮಾನ) ಮುಲ್ತಾನ ಎಂಬಲ್ಲಿನ ಸೂರ್ಯ ದೇವಸ್ಥಾನದಲ್ಲಿ ಗಾಯಕಿಯರನ್ನು ಕಂಡಂತೆ ಹೇಳುತ್ತಾನೆ. ಕಾಶ್ಮೀರದಲ್ಲಿ (ಕ್ರಿ.ಶ. ೭ನೆಯ ಶತಮಾನದಲ್ಲಿ ಈ ಸಂಪ್ರದಾಯವಿತ್ತೆದೆಂದು ರಾಜತರಂಗಿಣಿಯಿಂದ (iv ೩೧) ತಿಳಿದುಬರುತ್ತದೆ. ಗುಜರಾತಿನ ಬಹು ಪ್ರಸಿದ್ಧವಾದ ಸೋಮನಾಥ ದೇವಾಲಯದಲ್ಲಿ ಐನೂರು ನರ್ತಕಿಯರಿದ್ದಂತೆ ತಿಳಿದುಬರುತ್ತದೆ. (ಡಾ. ಚಿದಾನಂದಮೂರ್ತಿ. ೧೯೯೬, ಪುಟ - ೧೮೧)

ಉತ್ತರ ಭಾರತದಲ್ಲಿ ಮುಸ್ಲಿಮರ ದಾಳಿಗೆ ತುತ್ತಾದ ಕಾಲದಿಂದಲೇ ಈ ಪದ್ಧತಿಯು ಇಳಿಮುಖವಾಯಿತು. ಸೋಮನಾಥ ದೇವಾಲಯಗಳಂಥ ಅನೇಕ ದೇವಾಲಯಗಳನ್ನು ವಿಗ್ರಹ ಭಂಜಕರು ನಾಶಗೊಳಿಸಿ, ದೇವಾಲಯಗಳ ಸ್ಥಾನದಲ್ಲಿ ಮಸೀದಿಗಳನ್ನು ನಿರ್ಮಿಸಿದಾಗ ಈ ಪದ್ಧತಿಯು ದುರ್ಬಲವಾಯಿತು. ಆದರೆ ದಕ್ಷಿಣ ಭಾರತವು 'ಬಾಹ್ಯ' ಆಕ್ರಮಣಗಳಿಂದ ತೊಂದರೆಗೊಳಗಾದುದು ತೀರ ಕಡಿಮೆಯೆಂದೇ ಹೇಳಬಹುದು. ಇದರಿಂದ ಇಲ್ಲಿಯ ಸಾಮ್ರಾಟರು ದೇವಾಲಯಗಳ ನಿರ್ಮಾಣ ಮತ್ತು ಪ್ರಾಚೀನ ಸಂಪ್ರದಾಯಗಳ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿದರು. ತಾವು ನಿರ್ಮಿಸಿದ ದೇವಾಲಯಗಳಲ್ಲೆಲ್ಲ ತಮ್ಮ ವೈಭವದ ಸಂಕೇತವಾಗಿ ದೇವದಾಸಿಯರನ್ನು ನಿಯಮಿಸುತ್ತಿದ್ದರು. ರಾಜ್ಯ ಹಾಗೂ ದೇವಾಲಯಗಳೆರಡರ ಪೋಷಣೆಯಲ್ಲಿ ಈ ಪದ್ಧತಿಯು ಶಕ್ತಿಯುತವಾಗಿ ಅಭಿವೃದ್ಧಿ ಹೊಂದಿತು.

ಹೀಗಾಗಿ ಈ ಪದ್ಧತಿಯು ದಕ್ಷಿಣ ಭಾರತದ ಧಾರ್ಮಿಕ ಸಂಸ್ಕೃತಿಯಲ್ಲಿ ಆಳವಾಗಿ ಬೇರುಬಿಟ್ಟಿದೆ.

ದಕ್ಷಿಣ ಭಾರತದಲ್ಲಿ ಚೋಳ ಸಾಮ್ರಾಟನ ಆಡಳಿತ ಕಾಲಕ್ಕೆ ಸಂಬಂಧಿಸಿದ ಒಂದು ತಮಿಳು ಶಾಸನದಲ್ಲಿ ದೇವಾಲಯಕ್ಕೆ ಹುಡುಗಿಯರನ್ನು ಅರ್ಪಿಸುವುದರ ಕುರಿತಾದ ಉಲ್ಲೇಖವಿದೆ.

“ಅವನು ಶೈವ ಮತಾವಲಂಬಿ. ಕ್ರಿ.ಶ. ೯೮೫ರಲ್ಲಿ ಅವನು ಸಿಂಹಾಸನ ಏರಿದನು. ಕ್ರಿ.ಶ. ೧೦೪೦ರಲ್ಲಿ ತಂಜಾವೂರಿನ ಪ್ರಧಾನ ದೇವಾಲಯಕ್ಕೆ ‘ನಾಲ್ಕು ನೂರು’ ‘ತಾಳಿ ಚೇರಿವೆಂಡುಗಳ’ ಅಥವಾ ‘ದೇವಾಲಯದ ಮಹಿಳೆಯರು’ ಸಂಬಂಧ ಹೊಂದಿದ್ದರೆಂದು ಶಾಸನ ತಿಳಿಸುತ್ತದೆ. (ಜೋಗನ್ ಶಂಕರ್, ೧೯೯೩, ಪುಟ - ೭೩)

ಕರ್ನಾಟಕದಲ್ಲಿ ಈ ಪದ್ಧತಿಯು ಪ್ರಚಲಿತದಲ್ಲಿದ್ದ ಬಗ್ಗೆ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ. ೭೭೮ - ೭೯ರ ಪಟ್ಟದ ಕಲ್ಲಿನ ವಿರೂಪಾಕ್ಷ ದೇವಾಲಯದ ಶಾಸನವು ‘ದೇಗುಲದ ಸೂಳೆ’ಯೊಬ್ಬಳು ದಾನ ಕೊಟ್ಟ ವಿಷಯವನ್ನು ಸೂಚಿಸುತ್ತದೆ. “ಲೋಕ ಮಹಾದೇವಿಯರ ದೇಗುಲದ ಸೂಳೆ ಗೋಯಿಂದ ಪೊಡ್ಡಿಯ ಮಗಳು ಬಾದಿ (ಳಿ) ಪೊಟ್ಟಿಯೆಂಬೊಳ್ ಉತ್ತಮ ಗೋಸಾಸಮಿಜ್ಜೊಳ್ .....” ಇಲ್ಲಿಯ ನಾಮವಾಚಕಗಳ ಉತ್ತರ ಪದ ‘ಪೊಡ್ಡಿ’ ಎಂಬುದು ಹೊಸಗನ್ನಡದ ‘ಬೊಡ್ಡಿ’ (= ವೇಶ್ಯೆ)ಯಾಗಿರಬಹುದು. ಕ್ರಿ.ಶ. ೮೦೨ರ ತಾಮ್ರಪಟವೊಂದರಲ್ಲಿ ಜಿನಭವನದಲ್ಲಿ ನಡೆಯುವ ‘ವೀರ ವಿಲಾಸಿನೀ ವಿರಚಿತ ನೃತ್ತ ಗೀತ ವಾದ್ಯ’ ಇತ್ಯಾದಿಗಳಿಗಾಗಿ ದಾನವನ್ನು ಕೊಡಲಾಗಿದೆ. ಹಿಂದುಗಳ ಈ ಸಂಪ್ರದಾಯವು ಜೈನರ ದೇವಾಲಯುಗಳನ್ನು ಪ್ರವೇಶಿಸಿರಬೇಕಾದರೆ, ಕರ್ನಾಟಕದಲ್ಲಿ ಆ ಕಾಲಕ್ಕೆ ದೇವದಾಸಿ ಸಂಪ್ರದಾಯವು ಸ್ಥಿರವಾಗಿ ನಿಂತಿರಬೇಕೆಂದು ಡಾ. ಚಿದಾನಂದಮೂರ್ತಿಯವರು ಅಭಿಪ್ರಾಯ ಪಡುತ್ತಾರೆ. (೧೯೯೬. ಪುಟ - ೧೮೨) ನಂತರದ ಶಾಸನವೊಂದರಲ್ಲಿ ದೇವಾಲಯಕ್ಕೆ ಹೆಣ್ಣುಗಳನ್ನು ಮತ್ತು ಹಸುಗಳನ್ನು ದಾನ ಕೊಡುತ್ತಿದ್ದುದರ ಬಗ್ಗೆ ಉಲ್ಲೇಖವಿದೆ. “ಕ್ರಿ.ಶ. ೯೭೪ರ ಶಾಸನದಲ್ಲಿ ದೇವರಿಗೆ ಇಬ್ಬರು ಕನ್ನೆಯರನ್ನು ಹನ್ನೆರಡು ಹಸುಗಳನ್ನು ದಾನವಾಗಿ ಕೊಟ್ಟಂತೆ ಹೇಳಿದೆ. ಹತ್ತನೆಯ ಶತಮಾನದಿಂದೀಚಿಗೆ ಶಾಸನಗಳಲ್ಲಿ ದೇವದಾಸಿಯರಲ್ಲಿ ‘ಪಾತ್ರ’ ಮತ್ತು ‘ಸೂಳೆ’ ಎಂದು ಎರಡು ವಿಭಾಗ ಮಾಡುವಂತೆ ತೋರುತ್ತದೆ. ಕ್ರಿ.ಶ. ೯೭೫ರ ಶಾಸನವೊಂದರಲ್ಲಿ ಐವರು ಸೂಳೆಯರಿಗೆ ಮತ್ತು ಒಂದು ಪಾತ್ರಕ್ಕೆ ಪ್ರತ್ಯೇಕವಾಗಿ ದಾನಗಳನ್ನು ಕೊಟ್ಟಿದೆ. ಮತ್ತೊಂದು ಶಾಸನದಲ್ಲಿ ಹನ್ನೆರಡು ಜನ ಸೂಳೆಯರಿಗೆ ಮತ್ತು ಒಂದು ಪಾತ್ರಕ್ಕೆ ಪ್ರತ್ಯೇಕ ದಾನಗಳನ್ನು ಕೊಟ್ಟಿದೆ.” (ಅದೇ ೧೯೬೬, ಪುಟ - ೧೮೨)

ಕ್ರಿ.ಶ. ೧೨೦೪ರ ಮಂಗಳೂರಿನ ಶಾಸನವೊಂದದರಲ್ಲಿ “ಕೂತಾಡುವ ಬಾಕನಂಗೆಯರು” (ಅಂದರೆ ದೇವದಾಸಿಯರು ಕ್ರಮ ಪ್ರಕಾರವಾಗಿ ದಿನ ನಿತ್ಯವೂ ನರ್ತಿಸಬೇಕೆಂದು) ಸೂಚಿಸಲಾಗಿದೆ. (ಡಾ. ರಮೇಶ್ ಕೆ.ವಿ, ೧೯೭೮, ಪುಟ ೬೯). ಇದು ಅವರ ಕರ್ತವ್ಯ ಮತ್ತು ಮಹತ್ವವನ್ನು ಸೂಚಿಸುತ್ತದೆ.

ನಂತರ ಉದಯವಾದ ವಿಜಯನಗರ ಸಾಮ್ರಾಜ್ಯವು (ಕ್ರಿ.ಶ. ೧೩೩೬) ಹಿಂದೂ ಸಂಸ್ಕೃತಿ ಮತ್ತು ದೇವಾಲಯಗಳ ರಚನೆಗೆ ಹೆಚ್ಚಿನ ಪ್ರೋತ್ಸಾಹ ನೀಡಿತು. ಈ ಕಾಲದಲ್ಲಿ ದೇವದಾಸಿಯರ ಸ್ಥಾನಮಾನ ಸಮಾಜದ ಉನ್ನತ ಸ್ತರದಲ್ಲಿತ್ತೆಂದು ವಿದೇಶಿ ಪ್ರವಾಸಿಗರ ಬರಹಗಳಿಂದ ಮತ್ತು ಅಂದಿನ ಕಾಲದ ಸಾಹಿತ್ಯ ಕೃತಿಗಳಿಂದ ತಿಳಿದುಬರುತ್ತದೆ. 'ಆಮುಕ್ತಮಾಲ್ಯದ' ಕೃತಿಯಲ್ಲಿರುವ ವಿಜಯನಗರದ ವಾರಾಂಗನೆಯರ ಸುಂದರವಾದ ವರ್ಣನೆಯನ್ನು ಜಿ.ಎಸ್.ದೀಕ್ಷಿತ್ ಅವರು ಉಲ್ಲೇಖಿಸುತ್ತ "ವಿಜಯನಗರದ ವಾರನಾರಿಯರು ಅಥವಾ ವೇಶ್ಯೆಯರು ಯತಿಯ ಹೃದಯವನ್ನಾದರೂ ಝಲ್ಲೆನಿಸುವಷ್ಟು ಸೌಂದರ್ಯವತಿಯರು, ಸರಸಿಗಳು, ನರ್ತನ ಕುಶಲರು, ಸದಾ ಶುಚಿರ್ಭೂತರಾಗಿ, ಅಲಂಕೃತರಾಗಿ ಸುಗಂಧದ್ರವ್ಯಗಳನ್ನು ಪೂಸಿಕೊಂಡಿರುವವರು, ಅರಮನೆಗಳಂತಿರುವ ಸೌಧಗಳಲ್ಲಿ ಅವರ ವಾಸ. ಅವು ರಾಜನ ಹೊರಗಿನ ಅಂತಃಪುರಗಳಂತಿದ್ದವು. ಅವರು ಹಲವು ದೇಶ ಭಾಷೆಗಳಲ್ಲಿ ಮಾತಾಡುವುದರಲ್ಲಿಯೂ, ಕಾವ್ಯ ವಾಚನದಲ್ಲಿಯೂ ಸಮರ್ಥರು. ಮುತ್ತಿನ ಆಭರಣಗಳು ತೆಳುವಾದ ನಯವಾದ ವಸ್ತ್ರಗಳು, ಅವರಿಗೆ ಪ್ರಿಯವಾದವು. ಕಸ್ತೂರಿಯೇ ಅವರಿಗೆ ಪ್ರಿಯವಾದ ಲೇಪ, ಹೂವಿಗಿಂತ ಸುಗಂಧ ಪೂರಿತವಾದ ಧೂಪವೆ ಅವರಿಗೆ ಇಷ್ಟವಾದದ್ದು. ಅವರು ಹಾಡುಗಾರಿಕೆಯಲ್ಲಿಯೂ, ವೀಣಾವಾದನದಲ್ಲಿಯೂ ನಿಪುಣರು. ಅಲ್ಲಿನ ದೇವದಾಸಿಯರು ದೇವಾಲಯಗಳಲ್ಲಿ ಪೂಜಾ ಸಮಯಗಳಲ್ಲಿ ಸೇವೆ ಸಲ್ಲಿಸುವರು. ದೇವರ ಉತ್ಸವಗಳಲ್ಲಿಯೂ ವೇಶ್ಯೆಯರ ಮೇಳವಿರುತ್ತಿತ್ತು..... ಆ ಕಾಲದಲ್ಲಿ ವಾರನಾರಿಯರಿಗೆ, ದೇವದಾಸಿಯರಿಗೆ ಸಮಾಜದಲ್ಲಿ ಗೌರವದ ಸ್ಥಾನವಿತ್ತು". (ಜಿ.ಎಸ್. ದೀಕ್ಷಿತ್, ೧೯೯೭, ಪು - ೮೦).

ಪಾಯೇಸನು ವಿಜಯನಗರದ ದೇವಾಲಯಗಳಲ್ಲಿ ತಾನು ಕಂಡ ದೇವದಾಸಿಯರ ಬಗೆಗೆ ಇದೇ ಅಭಿಪ್ರಾಯವನ್ನು ಸೂಚಿಸುತ್ತಾನೆ. "ದೇವರ ಪೂಜೆಯ ಸಮಯದಲ್ಲಿ ದೇವಸ್ಥಾನಕ್ಕೆ ಸೇರಿದ ದೇವದಾಸಿಯರು ನೃತ್ಯ ಮಾಡುತ್ತಾರೆ. ಈ ದೇವದಾಸಿಯರು ಸೂಳೆಗಾರಿಕೆ ಮಾಡುತ್ತ ಊರಿನ ಅತ್ಯುತ್ತಮ ಬೀದಿಗಳಲ್ಲಿ ವಾಸ ಮಾಡುತ್ತಾರೆ. ಇವರ ಬಗ್ಗೆ ಜನ ಬಹಳ ಗೌರವ ತೋರಿಸುತ್ತಾರೆ. (ರೋಬರ್ಟ್ ಸೀವೆಲ್, ೧೯೮೦, ಪುಟ ೩೬೦). ಡಾ. ಶ್ರೀಕಂಠಶಾಸ್ತ್ರಿಗಳು "ವಿಜಯನಗರ ಸಾಮ್ರಾಜ್ಯದಲ್ಲಿ ದೇವದಾಸಿಯರು ಗುಪ್ತ ರಾಜಕೀಯ ತಂತ್ರಗಳನ್ನು ಕಂಡುಹಿಡಿದು ಅಧಿಕಾರಿಗಳಿಗೆ ಸಹಾಯ ಮಾಡುತ್ತಿದ್ದರೆಂದೂ, ಗ್ರೀಕರ 'ಹೆಟಿರೈ' ಅಂತೆ ವಿಜಯನಗರದ ವೇಶ್ಯೆಯರು ಗೌರವಸ್ಥರಾಗಿದ್ದರೆಂದೂ ಆಧರಿಸಿ ಹೇಳುವರು. (೧೯೫೪, ಪುಟ ೧೭೮).

ವಿಜಯನಗರಕ್ಕೆ ಬೇಟಿ ಇತ್ತ ಇನ್ನೊಬ್ಬ ವಿದೇಶಿ ಪ್ರವಾಸಿಗ ಅಬ್ದುಲ್ ರಜಾಕನು. ವೇಶ್ಯೆಯರ ಬಗೆಗೆ ಪ್ರಸ್ತಾಪಿಸುತ್ತ "ದರಾಬ್ ಖಾನೆಗೆ ಎದುರಾಗಿ ರಾಜ್ಯಪಾಲನ ಮನೆಯಿದೆ. ಇಲ್ಲಿ ಕಾವಲು ಕಾಯುವ ಹನ್ನೆರಡು ಸಾವಿರ ಜನ ಸೈನಿಕರಿಗೆ ಪ್ರತಿಯೊಬ್ಬರಿಗೂ ದಿನಕ್ಕೆ ಒಂದು ಫನಂ ಸಂಬಳ. ಈ ಸಂಬಳಕ್ಕೆ ಬೇಕಾದ ಹಣ ವೇಶ್ಯಾ ಗ್ರಹಗಳ ಮೇಲೆ ಹಾಕಿದ ತೆರಿಗೆಗಳಿಂದ ಬರುತ್ತದೆ" ಎಂದು ಹೇಳುತ್ತಾನೆ (ನಾಗೇಗೌಡ ಎಚ್ .ಎಲ್ , ೧೯೬೬, ಪುಟ ೧೬೦).

'ಬಾರ್ಬೋಸನು' ವೇಶ್ಯೆಯರ ಸಂಪತ್ತಿನ ಬಗ್ಗೆ ಬರೆಯುತ್ತ "ಈ ಯುವತಿಯರು ಬಹಳ ಮಾನ್ಯತೆಯಿಂದ ಇರುತ್ತಾರೆ. ಇವರಿಗೆ ಯಾರು ವಾರಸುದಾರರು ಇಲ್ಲದೇ ಹೋದಾಗ ಅವರ ಇಡೀ ಆಸ್ತಿಯೆಲ್ಲ ರಾಜನಿಗೆ ಸೇರುತ್ತದೆ. ಒಂದು ಸಲ ಇಂಥವನೊಬ್ಬನು ಸತ್ತಾಗ ರಾಜನಿಗೆ ೬೦,೦೦೦ ಚಿನ್ನದ ಪಾರ್ದೋಗಳು ಸಿಕ್ಕಿದವು. ಇಷ್ಟಲ್ಲದೆ ಆಕೆ ಹನ್ನೆರಡು ಸಾವಿರ ಚಿನ್ನದ ಪಾರ್ದೋಗಳನ್ನು ತಾನು ಸಾಕಿದ್ದ ದಾಸಿಯೊಬ್ಬಳಿಗೆ ದಾನ ಮಾಡಿದ್ದಾಳು" ಎಂದು ಹೇಳುತ್ತಾನೆ (ಅದೇ ೧೯೬೬, ಪುಟ ೩೦೦).

'ಪಾಯೀಸ್ 'ನು ಈ ನರ್ತಕಿಯರು ಧರಿಸಿರುವ ಆಭರಭಗಳನ್ನು ಕುರಿತು "ಈ ನರ್ತಕಿಯರು ಧರಿಸಿರುವ ಆಭರಣಗಳ ಐಸಿರಿಯನ್ನು ವರ್ಣಿಸಲು ಸಾಧ್ಯವಿಲ್ಲ. ವಜ್ರ ವೈಡೂರ್ಯಗಳ, ಮುತ್ತು ಮಾಣಿಕ್ಯಗಳ ಕೊರಳ ಪಟ್ಟಿ, ತೋಳ್ಬಂದಿ, ನಡುಪಟ್ಟಿ, ಕಾಲ್ಗಡಗ ಇವುಗಳನ್ನು ನೋಡಿ ಇವರಿಗೆ ಇಷ್ಟೊಂದು ಐಶ್ವರ್ಯ ಎಲ್ಲಿಂದ ಬಂದಿತೆಂದು ಆಶ್ಚರ್ಯವಾಗುತ್ತದೆ. ಇವರಲ್ಲಿ ಕೆಲವರಿಗೆ ಆಸ್ತಿ ಪಾಸ್ತಿಗಳಿವೆ" ಎನ್ನುತ್ತಾನೆ (ಅದೇ. ಪುಟ ೨೬೦).

ನಾಟ್ಯ ಗಾರ್ತಿಯರು ಅರ್ಗಹಾರವನ್ನು ಸ್ಥಾಪಿಸಿದ ಒಂದು ನಿದರ್ಶನವಿದೆ. "ಕ್ರಿ.ಶ. ೧೫೫೯ರ ಕುಣಿಗಲ್ಲಿನ ಒಂದು ಶಾಸನ ಎಲಹಂಕ ನಾಡಪ್ರಭು ಇಮ್ಮಡಿ ಹರಿಕೆಂಪಯ್ಯ ಗೌಡನ 'ಪಟ್ಟದ ನಾಟಕ ಶಾಲೆ'ಯ ಶ್ರೀ ರಂಗಮ್ಮ, ಶೃಂಗಾರ ಸಾಗರವೆಂಬ ಅಗ್ರಹಾರವನ್ನು ಸ್ಥಾಪಿಸಿದ್ದಳೆಂದು ತಿಳಿಸುತ್ತದೆ. 'ಪಟ್ಟದ ನಾಟಕ ಶಾಲೆ' ಎನ್ನುವುದು ನೃತ್ಯ ಸಭಾಂಗಣಕ್ಕೆ ಅನ್ವಯಿಸುತ್ತದೆ (ವೆಂಕಟರತ್ನಂ ಎ.ವಿ, ೧೯೭೪, ಪುಟ ೫೭).

ಕೆಳದಿ ಅರಸರ ಕಾಲದಲ್ಲಿ ದೇವದಾಸಿ ಪದ್ಧತಿಯು ವ್ಯಾಪಕವಾಗಿತ್ತು. ಅಂದು ಪ್ರಸಿದ್ಧ ದೇವಾಲಯಗಳಲ್ಲೆಲ್ಲ ನರ್ತಕಿಯರು ಇರುತ್ತಿದ್ದರು. ಇವರು ಸಮಾಜದಲ್ಲಿ ಗೌರವದ ಸ್ಥಾನವನ್ನು ಹೊಂದಿದ್ದು ಧಾರ್ಮಿಕ ಕಾರ್ಯಗಳಿಗೆ ದಾನ ದತ್ತಿಗಳನ್ನು ನೀಡುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. "ಕೆಳದಿ ಶಾಸನಗಳಲ್ಲಿ ಇವರನ್ನು 'ಹುಜೂರು ಮೇಳ'ದವರೆಂದು ಕರೆಯಲಾಗಿದೆ. ಅಂದು ದೇವದಾಸಿಯರು ಸಮಾಜದಲ್ಲಿ ಗೌರವವನ್ನು ಹೊಂದಿದ್ದರು. ಅವರ ವಿದ್ಯಾಭ್ಯಾಸ ಮೊದಲಾದವುಗಳ ಕುರಿತಂತೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಅವರು ನೃತ್ಯದಲ್ಲಿ ಪರಿಣತರಾಗಿದ್ದರೆಂದು ಊಹಿಸಬಹುದು. ಧಾರ್ಮಿಕ ಕಾರ್ಯಗಳಿಗೆ ದಾನ ದತ್ತಿಗಳನ್ನು ಅವರು ನೀಡುತ್ತಿದ್ದರು. ಶಾಸನಗಳಲ್ಲಿ ತಿಳಿಯುವಂತೆ ಶಿವಲಿಂಗಿ (ಕೆಳದಿ ಅರಸರ ಶಾಸನ ಸಂಖ್ಯೆ ೧೩೫) ಪುಟ್ಟ ತಾಯಿ, ಜಮಖಂಡಿ ಚೆನ್ನಿ ಎಂಬುವವರು ಮಠವನ್ನು ನಿರ್ಮಿಸಿದ್ದರು." (ಕೆ.ಜಿ.ವೆಂಕಟೇಶ ಜೋಯಿಸ್, ೧೯೯೬, ಪು - ೨೧೨).

ಮೈಸೂರು ಒಡೆಯರ ಕಾಲದಲ್ಲಿ ಗಣಿಕಾ ಜೀವನಕ್ಕೆ ತಿರಸ್ಕಾರವಿರಲಿಲ್ಲ. ಅದು ಸಮಾಜದಲ್ಲಿ ಅವಶ್ಯಕ ಪರಿಕರವೆಂಬ ಪುರಾತನ ಕಲ್ಪನೆಯೇ ಈ ಕಾಲದಲ್ಲಿ ಪ್ರಚಲಿತವಾಗಿತ್ತು. ಅಂದು ವೇಶ್ಯಾವಾಟಗಳಲ್ಲಿ ಉಚ್ಚವರ್ಗದ 'ಗಣಿಕೆ'ಯರು ಮತ್ತು ಸಾಮಾನ್ಯ ಸೂಳೆಯರು ಇರುತ್ತಿದ್ದರು. "ಗಣಿಕೆಯರು ವಿದ್ಯಾವಿಶಾರದೆಯರಾಗಿದ್ದರು.

ಸಂಗೀತಾಭ್ಯಾಸ, ನೃತ್ಯ ಶಿಕ್ಷಣಗಳಿಗೆ ಅವರು ಹೆಚ್ಚಿನ ಗಮನ ನೀಡುತ್ತಿದ್ದರು. ಗಣಿಕೆಯಾದವಳು ದೇಹ ಸೌಷ್ಠವಕ್ಕೂ, ಬುದ್ಧಿ ಶಕ್ತಿಗೂ ವಿಶೇಷ ಪ್ರಾತಿನಿಧ್ಯ ನೀಡಬೇಕಾಗಿದ್ದಿತು. ಭರತನಾಟ್ಯ ಪ್ರವೀಣೆಯರಾದ ಗಣಿಕೆಯರು ತಂಬೂರ, ವೀಣೆ, ತಾಳ, ಮದ್ದಳೆ ಮುಂತಾದ ಸಂಗೀತೋಪಕರಣಗಳ ಹಿನ್ನೆಲೆಯಲ್ಲಿ ಹಾಡುಗಾರಿಕೆಯನ್ನು ಕಲಿಯುತ್ತಿದ್ದರು.... ಪಗಡೆಯಾಟ ಚದುರಂಗದಾಟಗಳಲ್ಲಿ ಅವರದು ಎತ್ತಿದ ಕೈಯಾಗಿತ್ತು. ಅವರ ಧ್ಯೂತ ವಿನೋದಕ್ಕೆ ಪೋಷಕರು (ವಿಟರು) ಮಾರುಹೋಗಿದ್ದರು. ನಗರ ವಾಸಿಗಳಾದ ಈ ಗಣಿಕೆಯರು ವಿಲಾಸಿವೀದಿಗಳಲ್ಲಿ ವಾಸವಾಗಿದ್ದರು. (ಕೃಷ್ಣರಾವ್ ಎಂ.ವಿ, ಕೇಶವ ಭಟ್ಟ ಎಂ, ೧೯೭೦, ಪುಟ ೯೯೫).

ತುಳುನಾಡಿನ ಶಕ್ತಿ ಆರಾಧನಾ ಕೇಂದ್ರಗಳಲ್ಲಿ ದೇವದಾಸಿ ಪದ್ಧತಿಯು ಪ್ರಚಲಿತದಲ್ಲಿತ್ತು. ಕೊಲ್ಲೂರು, ಸೌಕೂರು, ಬಸ್ರೂರು, ಹಿರಿಯಡ್ಕ ಮೊದಲಾದ ಕಡೆಗಳಲ್ಲಿ ಶಕ್ತಿ ಆರಾಧನಾ ಕೇಂದ್ರಗಳಿವೆ. ದೇವಸ್ಥಾನಗಳಲ್ಲಿ ನೃತ್ಯಸೇವೆ ಮಾಡುವ ಪದ್ಧತಿಯು ರಾಜಾಶ್ರಯವಿರುವಲ್ಲಿ ಮಾತ್ರ ಬೆಳೆದಂತೆ ಕಾಣುತ್ತದೆ. ಬಾರ್ಕೂರು ಬಸ್ರೂರು ಮೊದಲಾದ ಪಟ್ಟಣಗಳು ಇತಿಹಾಸದಲ್ಲಿ ವಿಜಯನಗರ, ಕೆಳದಿ ಅರಸರುಗಳ ಅಧೀನಕ್ಕೊಳಪಟ್ಟಿದ್ದವು. ಅವರ ಪ್ರತಿನಿಧಿಗಳು ಇಲ್ಲಿ ರಾಜ್ಯಭಾರ ನಡೆಸುತ್ತಿದ್ದರು. ವಿಜಯನಗರದ ಅರಸರುಗಳು 'ವಿಲಾಸಿ' ಜೀವನಕ್ಕೆ ಹೆಚ್ಚಿನ ಮನ್ನಣೆ ಕೊಟ್ಟಿರುವುದರಿಂದ ಅದರ ಪ್ರಭಾವವನ್ನು ಇಲ್ಲಿಯೂ ಕಾಣಬಹುದು.

ಇಲ್ಲಿಯ ದೇವದಾಸಿಯರು ಮೂಲತ: ವಿಜಯನಗರ, ಕೆಳದಿ ಪಟ್ಟಣಗಳಿಂದ ಬಂದವರು. ಅಲ್ಲಿಯ ಸಂಪ್ರದಾಯವನ್ನೇ ಅನುಸರಿಸಿದವರು. "ಪುತ್ತಿಗೆಯ ದೇವದಾಸಿಯರನ್ನು ವಿಜಯನಗರದ 'ದೇವರಾಯ'ನು ಚೌಟರ ಸಾಮಂತ ರಾಜನಲ್ಲಿಗೆ ಉಳಿದ ರಾಜ್ಯದ ಅಧಿಕಾರಿಗಳ ಜೊತೆಗೆ ಕಳುಹಿಸಿದನೆಂದು ಪ್ರತೀತಿ ಇದೆ. ಪುತ್ತಿಗೆಯ ದೇವದಾಸಿಯರ ಕುಲದೇವರು 'ಎಲ್ಲಮ್ಮ' ಅವರ ಮಾತೃಭಾಷೆ ಇಂದಿಗೂ ಕನ್ನಡ. ಬಸ್ರೂರಿನ ದೇವದಾಸಿಯರು ಹಾಡುವ ಹಾಡಿನ ಭಾಷೆ ಸ್ಥಳೀಯ ಭಾಷೆಯಲ್ಲ." ಈ ಕೆಲವು ಕಾರಣಗಳಿಂದ ದೇವದಾಸಿಯರು ಬೇರೆ ಕಡೆಗಳಿಂದ ಬಂದವರೆಂದು ಹೇಳಬಹುದೆಂದು ಪ್ರೋ.ಕನರಾಡಿ ವಾಧಿರಾಜ ಭಟ್ಟರು ಅಭಿಪ್ರಾಯ ಪಡುತ್ತಾರೆ (೧೯೮೭, ಪುಟ ೫೭).

ಪುತ್ತಿಗೆಗೆ ವಿಜಯನಗರದಿಂದ ಬಂದರೆ ಹಿರಿಯಡ್ಕಕ್ಕೆ ಕೊಲ್ಲೂರಿನಿಂದ, ಬಸ್ರೂರಿಗೆ ಹಿರಿಯಡ್ಕದಿಂದ ಬಂದವರೆಂದು ತಿಳಿಯುತ್ತದೆ. ಶ್ರೀ.ಮಹಾಲಿಂಗೇಶ್ವರ ದೇವಸ್ಥಾನದವರು ದೇವರ ನರ್ತನ ಸೇವೆಗಾಗಿ ಹಿರಿಯಡ್ಕದಿಂದ ಬಸ್ರೂರಿನ ಕೋಳ್ಕೆರೆ ಮನೆತನದವರು ಇಬ್ಬರು ಹೆಣ್ಣುಮಕ್ಕಳನ್ನು ಕರೆಸಿ ದೇವಸ್ಥಾನದ ವತಿಯಿಂದ ಮನೆ, ಉಂಬಳಿಗಳನ್ನು ನೀಡಿ ವ್ಯವಸ್ಥೆ ಮಾಡಿದರು ಎಂದು ಈಗ ಉಳಿದಿರುವ ಕೊನೆಯ ತಲೆಮಾರಿನವರು ಹೇಳುತ್ತಾರೆ. ಈಗ ಮೂಡುಸಾಲಿನ ಒಂದು ಮನೆಯಲ್ಲಿ ಇಬ್ಬರು (ಗೆಜ್ಜೆ ಕಟ್ಟಿದವರು) ಮಾತ್ರ ಉಳಿದಿದ್ದಾರೆ.

## ೩.೪ ದೇವದಾಸಿ ಸಂಪ್ರದಾಯದ ಪ್ರೇರಣೆಗಳು

'ದೇವದಾಸಿ' ಸಂಪ್ರದಾಯ ನಾಗರಿಕತೆಯೊಂದಿಗೆ ತನ್ನ ಅಸ್ತಿತ್ವ ಉಳಿಸಿಕೊಂಡು ಬರಲು ಹಲವಾರು ಅಂಶಗಳು ಸಹಾಯಕವಾಗಿವೆ. ಮುಖ್ಯವಾಗಿ ಧರ್ಮ, ಸಾಮಾಜಿಕ ಪದ್ಧತಿ, ಆರ್ಥಿಕ ಮತ್ತು ರಾಜಕೀಯ ಕಾರಣಗಳು ಈ ಸಂಪ್ರದಾಯಕ್ಕೆ ಪ್ರತ್ಯಕ್ಷ ಇಲ್ಲವೆ ಪರೋಕ್ಷವಾಗಿ ಪ್ರೇರಣೆ ನೀಡಿವೆ.

ಆದಿಮ ಮಾನವನು ನಾಗರಿಕತೆಯ ಮೊದಲ ಹಂತದಲ್ಲಿ ಪ್ರಕೃತಿಯ ವೈಚಿತ್ರ್ಯಗಳಿಗೆ ಬೆರಗಾಗಿ ವಿವಿಧ ದೇವರುಗಳನ್ನು ಸೃಷ್ಟಿಸಿಕೊಂಡ. ಪ್ರಕೃತಿಯಲ್ಲಾಗುವ ಬದಲಾವಣೆಗಳಿಗೆಲ್ಲ ದೇವರೇ ಕಾರಣ ಎಂದು ತಿಳಿದು ದೇವರನ್ನು ತೃಪ್ತಿಪಡಿಸುವುದಕ್ಕಾಗಿ ನಾನಾ ರೀತಿಯ ಆಚರಣೆಗಳನ್ನು ರೂಢಿಗೆ ತಂದ. ಪರಿಣಾಮವಾಗಿ ಬಲಿಕೊಡುವ, ಬಸವಿ ಬಿಡುವ, ಬೆತ್ತಲೆ ಸೇವೆ ನಡೆಸುವಂತ ಕ್ರೂರ ಪದ್ಧತಿಗಳು ಹುಟ್ಟಿಕೊಂಡವು. ಮನುಷ್ಯನ ಅಂಧಶ್ರದ್ಧೆ, ನಂಬಿಕೆಗಳೇ ಇಂತಹ ಸಂಪ್ರದಾಯ ಆಚರಣೆಗಳ ಬೆಳವಣಿಗೆಗೆ ಪ್ರೇರಣೆಯಾಗಿರಬಹುದು.

ಶಕ್ತಿ ಕೇಂದ್ರಗಳಲ್ಲಿ ಸ್ತ್ರೀತ್ವದ ಪ್ರತೀಕವಾಗಿ 'ಶಕ್ತಿ' ಮತ್ತು ಪುರುಷತ್ವದ ಪ್ರತೀಕವಾಗಿ ವೀರಭದ್ರನ ಆರಾಧನೆಯಿದೆ 'ಫಲಶಕ್ತಿ' (Fertility God) ಅಥವಾ ಮಾತೃದೇವತೆಯೆನಿಸಿದ ಮಕ್ಕಳನ್ನು ಹಡೆಯುವ ಪ್ರಕೃತಿದತ್ತವಾದ ಗುಣವೇ ಶಕ್ತಿಯೆಂಬ ಮೂಲ ಭಾವನೆಯು ಕ್ರಮೇಣ ಸಾಮಾನ್ಯರಲ್ಲಿ ವ್ಯತ್ಯಾಸ ಹೊಂದಿ, ಮಕ್ಕಳನ್ನು ಕರುಣಿಸುವವಳು ದೇವಿ ಎಂಬ ನಂಬಿಕೆಯಾಗಿ ಬೆಳೆಯಿತು. ಮಕ್ಕಳಿಗೆ ಪ್ರಾಣಾಂತಿಕ ಖಾಯಿಲೆ ಬಂದಾಗ ಅಥವಾ ಮಕ್ಕಳನ್ನು ಹಡೆಯುವುದು ತೀರ ಕಷ್ಟವಾದರೆ ಮಗುವಿನ ಪ್ರಾಣರಕ್ಷಣೆ ಮಾಡುವ ಭಯದಿಂದ ಮಗುವನ್ನೇ ದೇವರಿಗೆ ಒಪ್ಪಿಸುವ ಹರಕೆ ಆರಂಭವಾಗಿರಬೇಕು. (ವಾದಿರಾಜ ಭಟ್ಟ ಕನರಾಡಿ, ೧೯೮೭, ಪುಟ ೪೫).

ಇದೇ ಮಾದರಿಯಲ್ಲಿ ಗೂಳಿಯನ್ನು ಮತ್ತು ದನದ ಕರುಗಳನ್ನು ದೇವರಿಗೆ ಒಪ್ಪಿಸುವ ಪದ್ಧತಿ ಗ್ರಾಮೀಣ ಪ್ರದೇಶಗಳಲ್ಲಿದೆ. ಇಲ್ಲಿ ಮನುಷ್ಯರನ್ನು ಮತ್ತು ದನಗಳನ್ನು ದೇವರಿಗೆ ಅರ್ಪಿಸುವುದರ ಹಿನ್ನೆಲೆ ಒಂದೇ ಆಗಿರುತ್ತದೆ. ಗೂಳಿಯನ್ನು ಊರಿನ ದೇವಸ್ಥಾನಕ್ಕೆ 'ಬಸವ' ಬಿಡುತ್ತಾರೆ. ಅದು ದೇವರಿಗೆ ಸೇರಿದ್ದು. ಅದು ಏನು ಮಾಡಿದರೂ ಯಾರ ಹೊಲವನ್ನೂ ಮೇದರೂ ಶಿಕ್ಷೆಯಿಲ್ಲ. ಅದಕ್ಕೆ ಪೂರ್ತಿ ಸ್ವಾತಂತ್ರ್ಯವಿದೆ. ಹಾಗೆಯೇ ದೇವರಿಗೆ ಬಿಟ್ಟ ಹೆಣ್ಣು 'ಬಸವಿ'ಯೂ ದೇವರಿಗೆ ಸೇರಿದವಳು. ಅವಳು ಯಾವ ಪುರುಷನ ಜೊತೆಯಾದರೂ ಸಂಬಂಧ ಇಟ್ಟುಕೊಳ್ಳುವ ಸ್ವಾತಂತ್ರ್ಯವಿದೆ. ಈ ಬಸವಿಯರು ಹರಕೆ ಅಥವಾ ವಂಶಾಭಿವೃದ್ಧಿಯ ಹಿನ್ನೆಲೆಯಲ್ಲಿ ದೇವರಿಗೆ ಅರ್ಪಿತರಾದವರು.

ಗಂಡು ಸಂತಾನ ಇಲ್ಲದೆ ಹುಟ್ಟಿದ ಏಕ ಮಾತ್ರ ಸಂತಾನ ಹೆಣ್ಣಾಗಿದ್ದರೆ ಅವಳನ್ನು 'ಬಸವಿ' ಬಿಡುವ ಪದ್ಧತಿ ಕೆಲವು ಜನಾಂಗಗಳಲ್ಲಿದೆ. ಅವಳು ಮದುವೆ ಆದರೆ 'ಕುಲಗೋತ್ರ' ಬದಲಾಗುತ್ತದೆ. ಕುಟುಂಬವು ನಿರ್ನಾಮ

ಹೊಂದುವುದು ಎನ್ನುವ ನಂಬಿಕೆಯಿಂದ ಬಸವಿ ಬಿಡುತ್ತಾರೆ. ಆಗ ಅವಳ ಹೊಟ್ಟೆಯಿಂದ ಹುಟ್ಟುವ ಮಕ್ಕಳು ತನ್ನ ತಂದೆಯ ಕುಲವನ್ನು ಮುಂದುವರಿಸುತ್ತಾರೆ ಮತ್ತು ಕುಟುಂಬದ ಆಸ್ತಿಯ ಹಕ್ಕುದಾರರಾಗುತ್ತಾರೆ. ಕರ್ನಾಟಕದಲ್ಲಿ ಮುಖ್ಯವಾಗಿ ಬೋಯಾ, ಬೇಡರು ಮತ್ತು ಕೆಲವು ಹರಿಜನ ಜಾತಿಗಳಲ್ಲಿ ಈ ಪದ್ಧತಿ ಇರುವುದು ಕಂಡುಬರುತ್ತದೆ. "ಇವರಲ್ಲಿ ಗಂಡು ಸಂತಾನವಿಲ್ಲದವರು ತಮ್ಮ ವಂಶ ಬೆಳೆಯಲು ಬೇಕಾದ ಒಂದು ಗಂಡು ಮಗುವಿಗಾಗಿ ತಮ್ಮ ಬಸವಿ ಹೆಣ್ಣು ಮಕ್ಕಳನ್ನು ಮನೆಯಲ್ಲಿಯೇ ಇಟ್ಟುಕೊಳ್ಳುತ್ತಾರೆ. ಈ ಪದ್ಧತಿಯಂತೆ ಹುಡುಗಿಯರನ್ನು ತಮ್ಮ ಆರಾಧ್ಯ ದೇವರ ದೇವಾಲಯಗಳಿಗೆ ಕರೆದುಕೊಂಡು ಹೋಗಿ ಅಲ್ಲಿ ಆಕೆಯನ್ನು ದೇವರಿಗೆ ಮದುವೆ ಮಾಡಲಾಗುವುದು. ದೇವರ ಪರವಾಗಿ ಪೂಜಾರಿಯಿಂದ ಆಕೆಗೆ ತಾಳಿಕಟ್ಟಿಸಿ ಕಾಲುಂಗುರಗಳನ್ನು ತೊಡಿಸಲಾಗುವುದು. ಈಕೆ ದೇವರನ್ನೇ ಮದುವೆಯಾದವಳಾದ್ದರಿಂದ ಸಮಾಜದಲ್ಲಿ ಅವಳನ್ನು ಕೀಳೆಂದು ತಿಳಿದುಕೊಳ್ಳಲಾಗುವುದಿಲ್ಲ". (ಕಡತೋಟದ ಎನ್.ಕೆ, ೧೯೮೩, ಪುಟ ೪೩).

ಸಮಾಜದ ಕೆಲವು ಕಟ್ಟುಪಾಡುಗಳನ್ನು ಮೀರಿದ ಸ್ತ್ರೀಯರು ದೇವದಾಸಿಯರಾಗುತ್ತಿದ್ದರು. ಉನ್ನತ ಕುಲದ ಹೆಣ್ಣು ಮಕ್ಕಳು ಮದುವೆಯಾಗದಿದ್ದಲ್ಲಿ, ಚಿಕ್ಕ ವಯಸ್ಸಿನಲ್ಲೇ ವಿಧವೆಯಾದಲ್ಲಿ ಮತ್ತು ವಿಧವೆಯರಿಗೆ ಹುಟ್ಟಿದ ಹೆಣ್ಣು ಮಕ್ಕಳ ವಿವಾಹ ಸಂಬಂಧಕ್ಕೆ ಸಮಾಜವು ಒಪ್ಪಿಕೊಳ್ಳದಿದ್ದಲ್ಲಿ ಅಂತವರು ದೇವಸ್ಥಾನದ ಆಶ್ರಯ ಪಡೆದು ದೇವದಾಸಿಯರಾಗುತ್ತಿದ್ದರು.

"ಅತಿ ಚಿಕ್ಕ ವಯಸ್ಸಿನ ವಿಧವೆಯರ ಬಗ್ಗೆ ದಯಾದಾಕ್ಷಿಣ್ಯ ತೋರಿಸಿದ ಪಕ್ಷದಲ್ಲಿ ಅವರನ್ನು ದೇವಸ್ಥಾನಗಳಿಗೆ ಕಳುಹಿಸಿ ಅಲ್ಲಿ ದೇವಸ್ಥಾನಕ್ಕೆ ಹಣಗಳಿಸಲು ದೇವದಾಸಿಯರಾಗಿ ಬಿಡುತ್ತಾರೆ......... ಮದುವೆಯಾಗದ ಕೆಲವು ಹೆಂಗಸರು ತಮ್ಮ ಆತ್ಮಸಂತೋಷದಿಂದ ದೇವದಾಸಿಯರಾಗುವುದು ಉಂಟು. ಇವರು ನಿಗದಿಯಾದ ವೇಳೆ ದೇವರ ಮುಂದೆ ನಿತ್ಯವೂ ಹಾಡಿ ಕುಣಿಯುತ್ತಾರೆ. ಉಳಿದ ವೇಳೆಯನ್ನು ತಮಗಿಷ್ಟ ಬಂದ ರೀತಿಯಲ್ಲಿ ಕಳೆಯುತ್ತಾರೆ". (ನಾಗೇಗೌಡ ಎಚ್.ಎಲ್, ೧೯೬೧, ಸಂ.೨, ಪುಟ ೨೯೭).

ಧಾರ್ಮಿಕ ಆಚರಣೆ ಮತ್ತು ನಂಬಿಕೆಯು ಈ ಪದ್ಧತಿಯ ಮುಂದುವರಿಕೆಗೆ ಪ್ರೇರಣೆಯಾಗಿದೆ ಎನ್ನುವುದು ಕಂಡುಬರುತ್ತದೆ. ಧಾರ್ಮಿಕ ಆಚರಣೆಗಳಿಗಾಗಿ ಕೆಲವು ಜನಾಂಗಗಳಲ್ಲಿ ಹುಡುಗಿಯರನ್ನು ಬಸವಿ ಬಿಡುವ ಪದ್ಧತಿ ಇದೆ. "ದಾಸರಾಟದ ದಾಸಿಯು ಇಂಥ ಒಬ್ಬ ದೇವದಾಸಿಯೇ ದಾಸರಲ್ಲಿ ಎಡಗೈದಾಸರು, ಬಲಗೈದಾಸರು ಎಂದು ಎರಡು ಪಂಗಡಗಳಿದ್ದು, ಎಡಗೈ ದಾಸರು ಕುಟುಂಬದ ಹಿರಿಯ ಮಗಳನ್ನು ದಾಸಿಯನ್ನಾಗಿ ಬಿಡಬೇಕೆಂಬ ಪದ್ಧತಿಯಿದೆ. ಬಿಡಬೇಕೆಂದ ಹುಡುಗಿಗೆ ಒಬ್ಬ ನಟುವಾನನಿಂದ ಹಾಡು ಕುಣಿತಗಳನ್ನು ಕಲಿಸಲಾಗುತ್ತದೆ. ಮುಂದೆ ಅವಳು ಮೈ ನೆರೆದ ಮೇಲೆ ಸಮೀಪದ ಹನುಮಪ್ಪನ ಅಥವಾ ತಿರುಪತಿ ದೇವಸ್ಥಾನದಲ್ಲಿ ಅವಳ ಮದುವೆಯ ಏರ್ಪಾಡಾಗುತ್ತದೆ. ಅಲ್ಲಿ ಅವಳು ದಾಸರು ತಮ್ಮ ಆಟದಲ್ಲಿ ಬಳಸುವ ಡೋಲುವಾದ್ಯದೊಂದಿಗೆ

ಮದುವೆಯಾಗುತ್ತಾಳೆ. ಆಮೇಲೆ ಅವಳು ಯಾರೊಂದಿಗಾದರೂ ಸಂಬಂಧ ಬೆಳೆಸಬಹುದು". (ಸಂ. ಚಂದ್ರಶೇಖರ ಕಂಬಾರ, ೧೯೮೫, ಪುಟ೧೦೬೧). ಅವಳಿಗೆ ಹುಟ್ಟಿದ ಮಕ್ಕಳೂ ಮುಂದೆ ದಾಸ ದಾಸಿಯರಾಗಿ ದಾಸರಾಟದಲ್ಲಿ ಭಾಗವಹಿಸುತ್ತಾರೆ.

ಧಾರ್ಮಿಕ ನಂಬಿಕೆಯ ಹಿನ್ನೆಲೆಯಲ್ಲಿ 'ಬಸವಿ' ಅಥವಾ 'ಜೋಗತಿ' ಬಿಡುವ ಪದ್ಧತಿ ಉತ್ತರ ಕರ್ನಾಟಕದಲ್ಲಿ ಇಂದಿಗೂ ಪ್ರಚಲಿತದಲ್ಲಿದೆ. ಸಾಮಾಜಿಕ ಪಿಡುಗೆನಿಸಿದ ಈ ಪದ್ಧತಿ ಸುಧಾರಣೆಯಾಗದ ಹಂತಕ್ಕೆ ತನ್ನ ಪ್ರಭಾವವನ್ನು ಚಾಚಕೊಂಡಿದೆ. ಎಲ್ಲಮ್ಮ ಅಥವಾ ರೇಣುಕೆಯೆಂಬ ಪೌರಾಣಿಕ ಸ್ತ್ರೀಯ ಕಥೆಯನ್ನಾಧರಿಸಿದ ಈ ಜೋಗತಿ ಸಂಪ್ರದಾಯ ತಲೆ ತಲಾಂತರದಿಂದ ಬೆಳೆದು ಬಂದಿದೆ. ಪರಂಪರಾನುಗತವಾಗಿ ಕುಟುಂಬದಲ್ಲಿ ಒಬ್ಬಳನ್ನು ದೇವರಿಗೆ ಅರ್ಪಿಸುವ ಪದ್ಧತಿಯಿದೆ. ಜೋಗತಿ ಬಿಡದಿದ್ದರೆ 'ಯಲ್ಲಮ್ಮ' ಮುನಿಯುತ್ತಾಳೆಂಬ ನಂಬಿಕೆಯೇ ಇದಕ್ಕೆ ಕಾರಣ.

ಧಾರ್ಮಿಕ ಶ್ರದ್ಧೆ ಮತ್ತು ಮೂಢ ನಂಬಿಕೆ ಜೋಗತಿ ಬಿಡಲು ಮುಖ್ಯ ಪ್ರೇರಣೆಯಾಗಿದೆ. ಯಾವುದೇ ಕಷ್ಟ ಸಂಭವಿಸಿದರೂ ಅದೆಲ್ಲಕ್ಕೂ ಎಲ್ಲಮ್ಮನೇ ಕಾರಣ ಎಂದು ನಂಬಿ, ಮಕ್ಕಳಾಗದೆ ಇರುವವರು, ರೋಗದಿಂದ ನರಳುವವರು ಹರಕೆಯ ರೂಪದಲ್ಲಿ ತಮ್ಮ ಹೆಣ್ಣು ಮಕ್ಕಳನ್ನು ಜೋಗತಿ ಬಿಡುತ್ತಾರೆ. ಕೆಲವರು ಅದು ತಮ್ಮ ಕುಲ ಕಸುಬೆಂದೇ ಭಾವಿಸಿದ್ದಾರೆ. ಹೆಣ್ಣು ಮಗು ಋತುಮತಿಯಾಗುವ ಮೊದಲೇ ಜೋಗತಿ ಪಟ್ಟ ಕಟ್ಟುತ್ತಾರೆ. ಈ ಸಂಪ್ರದಾಯ ಬಿಟ್ಟರೆ ಯಲ್ಲಮ್ಮ ಶಾಪಕೊಡುತ್ತಾಳೆ ಎಂಬ ಭೀತಿ, ಭ್ರಾಂತಿಗಳು ಈ ಪದ್ಧತಿಯ ಮುಂದುವರಿಕೆಗೆ ಕಾರಣವಾಗಿದೆ.

ಬಡತನವು ವೇಶ್ಯಾವೃತ್ತಿಗೆ ಪ್ರಮುಖ ಕಾರಣವೆಂದು ಕಂಡುಬರುತ್ತದೆ. ಆರ್ಥಿಕವಾಗಿ ದುರ್ಬಲರಾಗಿರುವ ಕೆಲವು ಹಿಂದುಳಿದ ವರ್ಗಗಳವರು ತಮ್ಮ ಹೆಣ್ಣು ಮಕ್ಕಳನ್ನು 'ಬಸವಿ' ಬಿಡುತ್ತಾರೆ. ಇದರಿಂದ ಹಣ ಸಂಪಾದನೆಗೆ 'ಧಾರ್ಮಿಕ ಪರವಾನಗಿ' ದೊರೆತಂತಾಗುತ್ತದೆ. ಇದೊಂದೇ ಅವರಿಗಿರುವ ಸುಲಭೋಪಾಯ. ಹೆಣ್ಣು ಮಕ್ಕಳನ್ನು ಧಾರ್ಮಿಕ ವೇಶ್ಯಾವೃತ್ತಿಗೆ ತೊಡಗಿಸುವುದರಿಂದ ಅವರು ತಮ್ಮ ಜೀವನದ ದಾರಿ ಕಂಡುಕೊಳ್ಳುತ್ತಾರೆ. ಇದು ಹೆಚ್ಚಾಗಿ ಹಿಂದುಳಿದ ವರ್ಗಗಳಲ್ಲಿ ಮತ್ತು ಅವಿದ್ಯಾವಂತರಲ್ಲಿ ಕಂಡುಬರುತ್ತದೆ.

ಪುರೋಹಿತ ವರ್ಗ ಮತ್ತು ಇನ್ನಿತರ ಪ್ರಭಾವೀ ವ್ಯಕ್ತಿಗಳ ಒತ್ತಡವು ಈ ಪದ್ಧತಿಯ ಬೆಳವಣಿಗೆಗೆ ಪ್ರೇರಣೆಯಾಯಿತು. ಈ ಪ್ರಭಾವೀ ವ್ಯಕ್ತಿಗಳು ದೇವದಾಸಿಯರ ಜೀವನವನ್ನು ಪ್ರಬಲವಾಗಿ ನಿಯಂತ್ರಿಸುತ್ತಿದ್ದರು. ಹುಡುಗಿಯರ ಸಮರ್ಪಣೆಯನ್ನು ದೇವರು ಹಾಗೂ ದೇವಾಲಯಕ್ಕೆ ಮಾಡಿಕೊಟ್ಟ ಮದುವೆ ಎಂದು ಅರ್ಥೈಸಿದರು. ದೇವದಾಸಿಯರ ಜೀವನವು ದೇವಾಲಯಕ್ಕೆ ಮತ್ತು ಅಲ್ಲಿಯ ಅರ್ಚಕ ಸಮುದಾಯಕ್ಕೆ ಮೀಸಲು ಎಂದು ಅದಕ್ಕೆ ಧಾರ್ಮಿಕ ಲೇಪ ಹಚ್ಚಿದರು. ದೇವಾಲಯಕ್ಕೆ ದೇವರನ್ನು ಪೂಜಿಸಲು ಬರುವ ಭಕ್ತಾದಿಗಳಿಗೆ ಆನಂದವನ್ನು ಹಾಗೂ

ದೈವೀ ಕಲ್ಪನೆಯನ್ನು ತಂದುಕೊಡುವ ಸಲುವಾಗಿ ದೇವದಾಸಿಯರು ದೇವರ ಹಾಗೂ ಅರ್ಚಕ ಪರಿವಾರದವರ ಸೇವೆಯನ್ನು ಮಾಡಲೇಬೇಕಿತ್ತು. ಸುಂದರವಾದ ನರ್ತಕಿಯರು ದೇವಾಲಯದ ಒಂದು ದೊಡ್ಡ ಆಸ್ತಿಯಾಗಿರುತ್ತಿದ್ದರು. ಅದರಲ್ಲೂ ದೇವಾಲಯಕ್ಕೆ ಸಮರ್ಪಿತಳಾಗುವವಳು ಕನ್ಯೆಯೇ ಆಗಿರಬೇಕಿತ್ತು. ತಮ್ಮ ಲೈಂಗಿಕ ತೃಪ್ತಿಗಾಗಿ ಪುರೋಹಿತರು ಮತ್ತು ಊರಿನ ಪ್ರಭಾವಿ ವ್ಯಕ್ತಿಗಳು ಆಕೆಯು ವೈವಾಹಿಕ ಜೀವನದಿಂದ ಹೊರಗುಳಿಯುವಂತೆ ಮಾಡುತ್ತಿದ್ದರು. ಪುರೋಹಿತ ವರ್ಗಗಳ ಈ ಧೋರಣೆಯ ಕುರಿತು ವಿದೇಶಿ ಯಾತ್ರಿಕ 'ಅಲ್ಬೆರೂನಿ' ಈ ರೀತಿ ಬರೆಯುತ್ತಾನೆ : "ಹಿಂದುಗಳು ವೇಶ್ಯಾ ವೃತ್ತಿಯನ್ನು ಅಷ್ಟು ಕಠಿಣ ರೀತಿಯಲ್ಲಿ ಶಿಕ್ಷಿಸುವುದಿಲ್ಲ. ಈ ತಪ್ಪಿಗೆ ರಾಜರುಗಳು ಕಾರಣರೇ ಹೊರತು ರಾಷ್ಟ್ರವಲ್ಲ. ರಾಜರುಗಳು ಅವಕಾಶ ಕೊಡದಿದ್ದರೆ ಬ್ರಾಹ್ಮಣರುಗಳೂ ಅರ್ಚಕರುಗಳೂ ದೇವಸ್ಥಾನದಲ್ಲಿ ಹಾಡಿ ಕುಣಿಯುವ ಹೆಂಗಸರ ಮಾನಕ್ಕೆ ಹಾನಿ ತರುತ್ತಿರಲಿಲ್ಲ. ರಾಜರುಗಳು ತಮ್ಮ ನಗರಗಳಲ್ಲಿ ಪ್ರಜೆಗಳ ಕಾಮತೃಪ್ತಿಗಾಗಿ ಈ ವೇಶ್ಯೆಯರನ್ನು ಇಟ್ಟು ಜನರನ್ನು ಆಕರ್ಷಿಸಿ ಹಣ ಸಂಪಾದನೆ ಮಾಡುತ್ತಾರೆ. ಈ ವೇಶ್ಯೆಯರ ಮೇಲೆ ಹಾಕುವ ತೆರಿಗೆಯಿಂದಲೂ, ಕಂದಾಯದಿಂದಲೂ ಬರುವ ಆದಾಯದಿಂದ ಸೈನ್ಯದ ಖರ್ಚನ್ನು ಸರಿದೂಗಿಸುತ್ತಾರೆ". (ನಾಗೇಗೌಡ ಎಚ್.ಎಲ್, ಸಂ - ೧, ಪುಟ ೩೮೬). ಈ ಪದ್ಧತಿಯು ದೇವಾಲಯ, ಸರ್ಕಾರ ಹಾಗೂ ಆ ಹುಡುಗಿಯರ ಕುಟುಂಬಗಳಿಗೆ ನಿಯತವಾದ ಆದಾಯದ ಮೂಲವೂ ಆಯಿತು. ಅಲ್ಲದೆ ಅನೇಕ ವ್ಯಕ್ತಿಗಳ ದೈಹಿಕ ಆಕಾಂಕ್ಷೆಯೂ ನೆರವೇರುತ್ತಿತ್ತು. ಆದ್ದರಿಂದ ಆ ಪದ್ಧತಿಯನ್ನು ನಿಯಂತ್ರಿಸಬೇಕಾದವರೇ ಪೋಷಿಸುತ್ತ ಬಂದರು. ಹೀಗೆ ಹತ್ತು ಹಲವು ಕಾರಣಗಳು ದೇವದಾಸಿ ಸಂಪ್ರದಾಯದ ಹುಟ್ಟು, ಬೆಳವಣಿಗೆಗೆ ಪ್ರೇರಣೆಗಳಾಗಿವೆ.

### ೩.೫ ಐತಿಹ್ಯಗಳು

ಕರ್ನಾಟಕದ ಸಂಸ್ಕೃತಿಯಲ್ಲಿ ದೇವದಾಸಿ ಪದ್ಧತಿ ಅಥವಾ ಧಾರ್ಮಿಕ ವೇಶ್ಯಾವೃತ್ತಿಗೆ ಸಂಬಂಧಿಸಿದಂತೆ ವಿಭಿನ್ನ ರೀತಿಯ ಐತಿಹ್ಯಗಳಿವೆ. 'ಎಲ್ಲಮ್ಮ', 'ರೇಣುಕ' ಅಥವಾ 'ಏಕವೀರಾ' ಎಂಬ ಹೆಸರಿನ ಸ್ತ್ರೀಯ ಕಥೆಯ ಹಿನ್ನೆಲೆಯಲ್ಲಿ 'ಜೋಗತಿ' ಮತ್ತು 'ಜೋಗಪ್ಪ' ಪದ್ಧತಿಯು ಬೆಳೆದು ಬಂದಿದೆ. ಎಲ್ಲಮ್ಮನ ಜೋಗತಿ ಪದ್ಧತಿಯು ಉತ್ತರ ಕರ್ನಾಟಕದಲ್ಲಿ ಹಾಗೂ ದಕ್ಷಿಣ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಸಂಪ್ರದಾಯವಾಗಿಯೇ ಬೆಳೆದುಬಂದಿವೆ.

ಅದೇರೀತಿ ಚಂದ್ರಗುತ್ತಿಯ ಗುಡ್ಡದಲ್ಲಿರುವ ರೇಣುಕಾಂಬ ಅಥವಾ ಗುತ್ಯಮ್ಮನಿಗೆ ದೇವದಾಸಿಯರಿಂದ ಬೆತ್ತಲೆ ಸೇವೆ ಅಥವಾ 'ದುಂಡ ಸೇವೆ'ಯು ಇತ್ತೀಚಿನ ವರ್ಷಗಳವರೆಗೆ ನಡೆಯುತ್ತಿತ್ತು. ಈ ಸ್ಥಳಕ್ಕೆ ಪರಶುರಾಮ ತನ್ನ ತಾಯಿ ರೇಣುಕೆಯ ತಲೆ ಕಡಿದ ಪುರಾಣವು ಅಂಟಿಕೊಂಡಿದೆ. ಕಾರ್ತವೀರ್ಯನ ಮಕ್ಕಳು ಜಮದಗ್ನಿಯನ್ನು ಸಂಹರಿಸಿ ರೇಣುಕೆಯನ್ನು ಬೆನ್ನಟ್ಟಿದ ಕತೆಯೂ ಪ್ರಾಣ ಮಾನ ರಕ್ಷಣೆಗಾಗಿ ರೇಣುಕೆ ಬೆಟ್ಟ ಹತ್ತಿ ಓಡಿದ ಕತೆಯೂ

ಈ ಜಾಗದೊಂದಿಗೆ ಬೆಸೆದುಕೊಂಡಿದೆ. ರೇಣುಕಾದೇವಿ ಗುಹೆಯೊಂದನ್ನು ಹೊಕ್ಕು ಅಲ್ಲಿ ಈಶ್ವರನೊಡನೆ ಐಕ್ಯಳಾದಳೆಂಬ ದಂತಕತೆಯಿದೆ. ಗುಹೆಯಲ್ಲಿ ಶಿವಲಿಂಗ ಸೃಷ್ಟಿಯಾಯಿತೆಂದು ಐತಿಹ್ಯ ಹೇಳುತ್ತಿದ್ದು, ಆ ಹಿನ್ನೆಲೆಯಲ್ಲಿ ಅದೇ ಲಿಂಗಕ್ಕೆ ಹಿಂದೆ ಬೆತ್ತಲೆ ಪೂಜೆ ನಡೆಯುತ್ತಿತ್ತು.

ಕುಮಾರ ರಾಮನ ಹೆಸರಲ್ಲಿ ಹೆಣ್ಣನ್ನು 'ಸೂಳೆ' ಬಿಡುವ ಪದ್ಧತಿ 'ದೊಂಬ'ರಲ್ಲಿ ಪ್ರಚಲಿತದಲ್ಲಿದೆ. ಇವರು ಧಾರ್ಮಿಕ ಕಾರ್ಯಗಳಿಗಾಗಿ ಹೆಣ್ಣನ್ನು ಸೂಳೆ ಬಿಡುತ್ತಾರೆ. ಅದಕ್ಕೆ ಹಿನ್ನೆಲೆಯಾಗಿ ಕಥೆಯೊಂದು ರೂಢಿಯಲ್ಲಿದೆ.

ಕುಮಾರ ರಾಮನ ರೂಪ ಲಾವಣ್ಯಗಳಿಗೆ ಮನ ಸೋತ ಆತನ ಮಲತಾಯಿ ರತ್ನಮ್ಮಾಜಿಯು ಹೇಗಾದರೂ ಅವನನ್ನು ಸೇರಬೇಕೆಂದು ಸಂಚು ನಡೆಸುತ್ತಾಳೆ. ಇದಕ್ಕೆ ಆತ ನಿರಾಕರಿಸಿದ್ದರಿಂದ ಅವಮಾನಿತಳಾಗಿ ಪ್ರತೀಕಾರವಾಗಿ ಅವನನ್ನು ಕೊಲ್ಲಿಸುವ ತಂತ್ರ ಹೂಡುತ್ತಾಳೆ. ತನ್ನ ಮುದ್ದಿನ ರಾಣಿಯ ಮಾತು ಕೇಳಿ ಗಂಡ ಕಂಪಿಲರಾಯ ಮಗನನ್ನು ಕೊಲ್ಲಿಸಲು ಮಂತ್ರಿಗೆ ಆಜ್ಞೆ ಮಾಡುತ್ತಾನೆ. "ವಾಸ್ತವ ಸ್ಥಿತಿಯನ್ನರಿತ ಚಾಣಕ್ಷ ಮಂತ್ರಿ ಜಾಣ್ಮೆಯಿಂದ ತನ್ನ ಮಗನಾದ ಹೋಲಿಕೆ ರಾಮನ ಶಿರವನ್ನು ಕಡಿದು ರಾಣಿಗೆ ತೋರಿಸುತ್ತಾನೆ. ಹೋಲಿಕೆ ರಾಮನು ಸಾಯುವಾಗ 'ಕುಮಾರ ರಾಮನ ಮೇಲೆ ಅನ್ಯಾಯವಾಗಿ ಆಪಾದನೆ ಮಾಡಿ ನನ್ನನ್ನು ಕೊಲ್ಲಿಸುತ್ತಿರುವ ನಿನ್ನ ವಂಶದಲ್ಲಿ ಗಂಡು ಮಕ್ಕಳೇ ಆಗದಿರಲಿ, ಹುಟ್ಟುವ ಹೆಣ್ಣುಗಳೆಲ್ಲ ವೇಶ್ಯೆಯರಾಗಿ ವಂಶ ಪಾರಂಪರ್ಯ ನನ್ನ ರುಂಡದ ಎದುರು ಹಾಡುತ್ತಾ ನರ್ತಿಸುತ್ತಿರಬೇಕು' ಎಂದು ಶಾಪಕೊಡುತ್ತಾನೆ. ಈ ಶಾಪವೇ ದೊಂಬತಿಯರ ನೃತ್ಯಕ್ಕೆ ಕಾರಣವಾಗಿದೆ. ದೊಂಬರ ಹಬ್ಬದಲ್ಲಿ ಈಗಲೂ ದೊಂಬತಿಯರ ನೃತ್ಯ ಕಾಣಬಹುದು". (ಡಾ. ಸ.ಚಿ.ರಮೇಶ್, ೨೦೦೧, ಪುಟ ೧೬೪). ಈ ಐತಿಹ್ಯದ ಹಿನ್ನೆಲೆಯಲ್ಲಿ ದೊಂಬರಲ್ಲಿ ಇಂದಿಗೂ ಹೆಣ್ಣನ್ನು ಸೂಳೆಬಿಡುವ ಪದ್ಧತಿಯಿದೆ. ಧಾರ್ಮಿಕ ಪಾವಿತ್ರತೆ ಇಂದಿಗೂ ಈ ಪದ್ಧತಿಯ ಮುಂದುವರಿಕೆಗೆ ಕಾರಣವಾಗಿದೆ.

ದೇವದಾಸಿ ಪದ್ಧತಿಗೆ ಹಿನ್ನೆಲೆಯಾಗಿ ಬೇರೆ ಬೇರೆ ಐತಿಹ್ಯಗಳು ಪ್ರಚಲಿತದಲ್ಲಿದ್ದಂತೆ ಬಸ್ರೂರಿನ ದೇವದಾಸಿಯರ ಪ್ರಖ್ಯಾತಿಗೆ ಸಂಬಂಧಿಸಿದ ಐತಿಹ್ಯವೊಂದು ಪ್ರಸಿದ್ಧವಾಗಿದೆ.[೧] ಅವರ ಸೌಂದರ್ಯ ರೂಪ ಲಾವಣ್ಯಕ್ಕೆ 'ವೀರಭದ್ರ'ನೇ ಮಾರುಹೋಗಿದ್ದಾನೆಂದರೆ ಅವರ ಪ್ರಸಿದ್ಧಿಯ ಅರಿವಾದೀತು.

ರಾವುತ ಕೇರಿಯಲ್ಲಿ ಬಳೆಗಾರರ ಪ್ರಾಚೀನವಾದ ದೇವಿ ಅಮ್ಮನವರ ದೇವಸ್ಥಾನವಿದೆ. ಗರ್ಭಗುಡಿಯಲ್ಲಿ ಮಹಾಕಾಳಿ, ಮಹಾಲಕ್ಷ್ಮಿ, ಮಹಾಸರಸ್ವತಿಯರ ಮೂರ್ತಿಗಳಿವೆ. ಒಳ ಮಂಟಪದಲ್ಲಿ ಮನುಷ್ಯ ಗಾತ್ರದ ಭದ್ರಕಾಳಿ, ವೀರಭದ್ರ ಹಾಗೂ ಬೆತ್ತಲೆ ಪರಮೇಶ್ವರಿಯ ಚಂದನದ ಕಲಾತ್ಮಕವಾದ ಪ್ರತಿಮೆಗಳಿವೆ. ವೀರಭದ್ರನ ಕಾಲುಗಳಿಗೆ ಸರಪಳಿ ಹಾಕಿ ಮೊಳೆಯಿಂದ ಜಡಿದು ಬಂಧಿಸಲಾಗಿದೆ. ಅವನ ಎದುರು 'ಬೆತ್ತಲೆ ಪರಮೇಶ್ವರಿ'ಯ ಮೂರ್ತಿಯನ್ನು ನಿಲ್ಲಿಸಲಾಗಿದೆ.

ಹಿಂದೆ ಬಸ್ರೂರಿನ ರಾವುತ ಕೇರಿಯಲ್ಲಿದ್ದ ವೇಶ್ಯೆಯರಲ್ಲಿ ವೀರಭದ್ರನು ಅನುರಕ್ತನಾಗಿದ್ದನಂತೆ. ದೇವದಾಸಿಯರ ಹೆಣ್ಣು ಮಕ್ಕಳು ಊರಿನ ದೇವರಾದ ಮಹಾಲಿಂಗೇಶ್ವರನಿಗೆ ತಮ್ಮನ್ನು ಒಪ್ಪಿಸಿಕೊಂಡು ಅವನೇ ತಮ್ಮ ಪತಿಯೆಂದು ಭಾವಿಸಿ ತಾಳಿ ಕಟ್ಟಿಸಿಕೊಳ್ಳುತ್ತಿದ್ದರು. ಅಂತಹ ಹೆಣ್ಣಿನ ಶೋಭನ ಪ್ರಸ್ತವನ್ನು ಆ ಊರಿನ ಶ್ರೀಮಂತ ಜಮೀನ್ದಾರರು ಅಥವಾ ಮೇಲ್ವರ್ಗದವರು ಅದ್ದೂರಿಯಾಗಿ ನಡೆಸಿ, ಮುಂದಿನ ದಿನಗಳಲ್ಲಿ ಅವಳನ್ನು ತಮ್ಮ ಉಪ ಪತ್ನಿಯಂತೆ ಸ್ವೀಕರಿಸುವುದು ಪದ್ಧತಿಯಾಗಿತ್ತು. ಆದರೆ ಶೋಭನ ಪ್ರಸ್ತ ನಡೆದ ಮರುದಿನ ಬೆಳಗಾತ ಏಳುವಾಗಲೇ ಅಂತಹ ಹೆಣ್ಣು ಮಕ್ಕಳು ಸಾಯುತ್ತಿದ್ದರು.

ಇದರಿಂದ ಭಯಭೀತರಾದ ದೇವದಾಸಿಯರೆಲ್ಲ ಒಗ್ಗೂಡಿ ಕೇರಳದಿಂದ ಮಂತ್ರವಾದಿ ಮಲೆಯಾಳಿ ಬೊಬ್ಬರ್ಯನನ್ನು ಕರೆಸಿ ಪ್ರಶ್ನೆಯಿಡಿಸಿದರು. ಇದಕ್ಕೆಲ್ಲ ವೀರಭದ್ರನ ಕಾಮತೃಷೆಯೇ ಕಾರಣ, ಆತನೇ ಮನುಷ್ಯ ರೂಪ ತಾಳಿ ದೇವದಾಸಿಯರನ್ನು ಕೂಡುತ್ತಿದ್ದನೆನ್ನುವ ವಿಚಾರ ತಿಳಿದು ಬಂತು. ನಂತರ ಮಂತ್ರವಾದಿಯು ತನ್ನ ಮಂತ್ರವಾದದ ಬಲದಿಂದ ವೀರಭದ್ರನನ್ನು ದಿಗ್ಬಂಧನಗೊಳಿಸಿ, ಗುಡಿಯಿಂದ ಹೊರಕ್ಕೆ ಅಲೆದಾಡದಂತೆ ಮಾಡಿದನು. ಕಾಲಿಗೆ ಸರಪಳಿ ಬಿಗಿದು, ಮಾಟದ ಮೊಳೆಯೊಂದನ್ನು ಜಡಿದನು. ಅವನ ಕಾಮದ ತೃಪ್ತಿಗಾಗಿ ಎದುರಿಗೆ ಬೆತ್ತಲೆ ಹೆಣ್ಣಿನ (ಬೆತ್ತಲೆ ಪರಮೇಶ್ವರಿ) ಪ್ರತಿಮೆಯನ್ನು ನಿಲ್ಲಿಸಿದರು. ಅಂದಿನಿಂದ ಅವನ ಉಪಟಳ ಕಡಿಮೆಯಾಯಿತು. ಮಲೆಯಾಳಿ ಬೊಬ್ಬರ್ಯನು ದೇವದಾಸಿಯರ ಗೌರವಕ್ಕೆ ಪಾತ್ರನಾಗಿ ಅಲ್ಲಿಯೇ ನೆಲೆಸಿ ಪೂಜಾರ್ಹನಾದನು.

**ಟಿಪ್ಪಣಿ**

೧. ಈ ವಿವರ ನೀಡಿದವರು ಬಿ. ಲಕ್ಷ್ಮೀನಾರಾಯಣ ಉಪಾಧ್ಯಾಯ ಮತ್ತು ಬಿ.ಕೆ. ಬಳೆಗಾರ, ಬಸ್ರೂರು ಇವರು.



ಅಧ್ಯಾಯ : ೪

# ಆಚರಣೆಗಳು

೪.೧ ಜೀವನಾವರ್ತನ ಆಚರಣೆಗಳು

೪.೨ ವಾರ್ಷಿಕಾವರ್ತನ ಆಚರಣೆಗಳು

೪.೩ ಇತರ ಆಚರಣೆಗಳು

ಅಧ್ಯಾಯ : ೪

# ಆಚರಣೆಗಳು

ಸಂಪ್ರದಾಯಬದ್ಧವಾಗಿ ಜೀವನ ನಡೆಸುತ್ತಿರುವ ಒಂದು ಜನಾಂಗ ತನ್ನದೇ ಆದ ಅನೇಕ ಜೀವನಪರ್ಯಂತದವರೆಗಿನ ಆಚರಣೆಗಳನ್ನು ಅಳವಡಿಸಿಕೊಂಡಿರುತ್ತದೆ. ಜನಪದರಿಗೆ ದೇವರನ್ನು ಪ್ರತ್ಯೇಕಿಸಿದ ಧರ್ಮವಿಲ್ಲ. ಇವರ ಧಾರ್ಮಿಕ ಸಂಪ್ರದಾಯದ ಆಚರಣೆಗಳು, ದೈವ ನಂಬಿಕೆಯಲ್ಲಿರುವ ಭಕ್ತಿ ಶ್ರದ್ಧೆಗಳನ್ನು ದೃಢಪಡಿಸುತ್ತವೆ.

ದೇವದಾಸಿಯರ ಜೀವನವೂ ಹಲವಾರು ವೈಶಿಷ್ಟ್ಯಪೂರ್ಣವಾದ ಆಚರಣೆಗಳಿಂದ ಕೂಡಿತ್ತು. ಇಲ್ಲಿ ಮುಖ್ಯವಾಗಿ ಎರಡು ಅಂಶಗಳನ್ನು ಗಮನಿಸಬೇಕಾಗುತ್ತದೆ. ಸ್ಥಾಯಿಯಾಗಿರುವ ದೈವಭಕ್ತಿ ಮತ್ತು ಆ ಭಕ್ತಿಯ ಆಶ್ರಯದಲ್ಲಿ ಬೆಳೆದು ಬಂದಿರುವ ಸಾಂಪ್ರದಾಯಿಕ ಆಚರಣೆಗಳು. ಈ ಆಚರಣೆಗಳೆಲ್ಲ ಪರಂಪರಾಗತ ನಂಬಿಕೆಗಳಾಗಿ ಮುಂದುವರಿದುಕೊಂಡು ಬಂದಿವೆ. ಪ್ರಸ್ತುತ ಅಧ್ಯಾಯದಲ್ಲಿ 'ಬಸ್ರೂರಿನ ದೇವದಾಸಿ'ಯರಿಗೆ ಸಂಬಂಧಿಸಿದ ಕೆಲವು ಆಚರಣೆಗಳನ್ನು ಉಲ್ಲೇಖಿಸಲಾಗಿದೆ.

## ೪.೧ ಜೀವನಾವರ್ತನ ಆಚರಣೆಗಳು

ಈ ಆಚರಣೆಗಳು ದೇವದಾಸಿಯರ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದವುಗಳು ಕೂಡ ಆಗಿರುತ್ತವೆ. ಇಲ್ಲಿ ದೇವದಾಸಿಯರ ಕುಟುಂಬದಲ್ಲಿ ನಡೆಯುವ ಹೆಣ್ಣಿನ ಬಯಕೆ, ಮಗುವಿನ ಜನನ, ಹೆಣ್ಣು ಮೈನೆರೆದಾಗಿನ ಆಚರಣೆಗಳು, ಮದುವೆ, ಶೋಭನ, ಮರಣ ಸಂಸ್ಕಾರ ಮೊದಲಾದ ಆಚರಣೆಗಳನ್ನು ವಿವರಿಸಲಾಗಿದೆ.

### ೪.೧.೧ ಜನನ ಸಂಸ್ಕಾರ

ಜೀವ ವಿಕಾಸದಲ್ಲಿ ಸಂತಾನೋತ್ಪತ್ತಿಗೆ ಅತ್ಯಂತ ಮಹತ್ವವಿದೆ. ವಿವಾಹದ ಮೂಲ ಉದ್ದೇಶವೂ ಇದೇ ಆಗಿದೆ. ಆರೋಗ್ಯಕರ ಸಂತಾನವನ್ನು ಸಹಜವಾಗಿಯೇ ಎಲ್ಲರೂ ಬಯಸುತ್ತಾರೆ. 'ಸೃಷ್ಟಿಕ್ರಿಯೆ'ಗೆ ಸಿದ್ಧಳಾಗುವ

ಈ ಅವಧಿ ಹೆಣ್ಣಿನ ಜೀವನದಲ್ಲಿ ಅತ್ಯಂತ ಮಹತ್ವಪೂರ್ಣ ಮತ್ತು ಅಷ್ಟೇ ಸೂಕ್ಷ್ಮವಾದದು. ಅದಕ್ಕಾಗಿ ಈ ಸಂದರ್ಭದಲ್ಲಿ ಗರ್ಭಿಣಿ ಸ್ತ್ರೀಯರನ್ನು ಎಲ್ಲ ಸಮುದಾಯಗಳಲ್ಲೂ ಹೆಚ್ಚು ಅಕ್ಕರೆಯಿಂದ ಪೋಷಿಸಲಾಗುವುದು. ಅದರಲ್ಲೂ ಚೊಚ್ಚಲ ಬಸುರಿಯನ್ನು ಅತ್ಯಂತ ಕಾಳಜಿಯಿಂದ ನೋಡಿಕೊಳ್ಳಲಾಗುವುದು. ಅವಳಿಂದ ಕಠಿಣವಾದ ಕೆಲಸಗಳನ್ನು ಮಾಡಿಸುವುದಿಲ್ಲ. ಈ ಸಂದರ್ಭದಲ್ಲಿ ಗರ್ಭಿಣಿಯ ಆರೈಕೆಯನ್ನು ಅವಳ ತಾಯಿ ಅಥವಾ ಅಜ್ಜಿ ನೋಡಿಕೊಳ್ಳುತ್ತಾರೆ.

ಗರ್ಭವತಿಯಾದ ದೇವದಾಸಿಗೆ 'ಸೀಮಂತ'ವನ್ನು ಮಾಡುತ್ತಾರೆ. ಇದನ್ನು 'ಹೂ ಮುಡಿಸುವುದು' ಅಥವಾ 'ಬಯಕೆ ಮದಿ' ಎಂದು ಬಸ್ರೂರಿನ ಪ್ರಾದೇಶಿಕ ಭಾಷೆಯಲ್ಲಿ ಕರೆಯುತ್ತಾರೆ. ಸಾಮಾನ್ಯವಾಗಿ ಗರ್ಭಿಣಿಯಾಗಿ ಏಳು ತಿಂಗಳು ತುಂಬುವಾಗ ಈ ಸಂಸ್ಕಾರವನ್ನು ನೆರವೇರಿಸಲಾಗುವುದು. ಸೀಮಂತದ ನಂತರ ಮುಂದೆ ಮಗುವಿನ ಜನನವಾಗಿ ಮೂರು ತಿಂಗಳವರೆಗೆ ಅವಳು ದೇವಸ್ಥಾನಕ್ಕೆ ಹೋಗುವಂತಿಲ್ಲ.

ಪುರೋಹಿತರಲ್ಲಿ ಪ್ರಸಕ್ತವಾದ ದಿನ ಕೇಳಿ 'ಬಯಕೆ'ಗೆ ಮುಹೂರ್ತ ಇಡುತ್ತಾರೆ. ಅಂದು ಸಂಬಂಧಿಕರಿಗೆಲ್ಲ ಆಮಂತ್ರಣ ಇರುತ್ತದೆ. ದೇವದಾಸಿಯನ್ನು ಇಟ್ಟುಕೊಂಡವನು ಅವಳಿಗೆ ಹೊಸ ಬಟ್ಟೆ, ಚಿನ್ನದ ಆಭರಣಗಳನ್ನು ಉಡುಗೊರೆಯಾಗಿ ಕೊಡುತ್ತಾನೆ. ಅಂದು ಅವಳಿಗೆ ಹೊಸ ಸೀರೆ ಉಡಿಸಿ, ಕೈ ತುಂಬ ಬಳೆ ಮತ್ತು ಆಭರಣ ತೊಡಿಸಿ ಶೃಂಗಾರ ಮಾಡುತ್ತಾರೆ. ಬಯಕೆಯಲ್ಲಿ ಇತರ ಹೂಗಳೊಂದಿಗೆ ಸಿಂಗಾರದ ಹೂವನ್ನು ಬಳಸುವ ಪದ್ಧತಿಯಿದೆ. ನಂತರ ಶುಭ ಮುಹೂರ್ತದಲ್ಲಿ ಗೆಜ್ಜೆ ಕಟ್ಟಿದ ಐದು ಮಂದಿ ದೇವದಾಸಿಯರು ಹೂಮುಡಿಸಿ, ಮಡಿಲು ತುಂಬಿ, ಆರತಿ ಬೆಳಗುತ್ತಾರೆ. ಮಡಿಲು ತುಂಬುವಾಗ ಎಲೆ, ಅಡಿಕೆ, ತೆಂಗಿನಕಾಯಿ, ಅಕ್ಕಿ ಮೊದಲಾದ ವಸ್ತುಗಳನ್ನು ಬಳಸುತ್ತಾರೆ. ಅಂದು ಊರಿನ ಪ್ರಧಾನ ದೇವರಿಗೆ ವಿಶೇಷ ಪೂಜೆ ನಡೆಯುತ್ತದೆ. ಆ ದಿನ 'ಗರ್ಭಿಣಿ' ಬಯಸುವ ತಿಂಡಿಯನ್ನೆಲ್ಲ ತಯಾರಿಸಿ ಉಣಬಡಿಸುತ್ತಾರೆ. ವಿಶೇಷವಾದ ಕರಿದ ತಿಂಡಿಗಳಾದ ಚಕ್ಕಲಿ, ಉಂಡೆ ಮೊದಲಾದವುಗಳನ್ನು ಮಾಡುತ್ತಾರೆ.

ಸೀಮಂತದ ಶಾಸ್ತ್ರ ಮುಗಿದ ಮೇಲೆ ಮುಂದೆ ಹೆರಿಗೆ ಆಗುವವರೆಗೆ ಆಕೆ ವಿಶ್ರಾಂತಿ ಪಡೆಯುತ್ತಾಳೆ. ನೆರೆಹೊರೆಯವರು, ಸಂಬಂಧಿಗಳು, ಊಟಕ್ಕೆ ಆಹ್ವಾನಿಸಿ ಇಷ್ಟವಾದ ತಿಂಡಿ ಮಾಡಿ ಬಡಿಸುತ್ತಾರೆ. ಆಕೆಯ ಶಾರೀರಿಕ ಲಕ್ಷಣವನ್ನು ಗಮನಿಸಿ ಅನುಭವಿ ಸ್ತ್ರೀಯರು ಮಗು ಗಂಡೋ, ಹೆಣ್ಣೋ? ಎಂದು ಲೆಕ್ಕ ಹಾಕುತ್ತಾರೆ. ಹೆರಿಗೆ ಸುಸೂತ್ರವಾಗಿ ಆಗುವಂತೆ ಕುಲದೈವಕ್ಕೆ ಹರಕೆ ಹೇಳಿಕೊಳ್ಳುವುದೂ ಇದೆ. ಹಿಂದೆ ಆಸ್ಪತ್ರೆಗಳೆಲ್ಲ ಇರದ ಕಾಲದಲ್ಲಿ ಮನೆಯಲ್ಲಿಯೇ ಪ್ರಸೂತಿ ನಡೆಯುತ್ತಿತ್ತು.

ಗರ್ಭಿಣಿಗೆ ಪ್ರಸವ ವೇದನೆ ಪ್ರಾರಂಭವಾದ ಕೂಡಲೆ ಊರಿನಲ್ಲಿ ಈ ಕೆಲಸದಲ್ಲಿ ಅನುಭವ ಇರುವ ಹೆಂಗಸರನ್ನು ಕರೆಸುತ್ತಾರೆ. ನೆರೆಹೊರೆಯ ಹೆಂಗಸರು ಆಕೆಗೆ ಸಹಾಯ ಮಾಡುವರು. ಮನೆಯಲ್ಲಿ ತಾಯಿ ಮತ್ತಿತರರು ಹೆರಿಗೆ ಮಾಡಿಸುವ ಸ್ಥಳವನ್ನು ಶುಚಿಗೊಳಿಸಿ ಗರ್ಭಿಣಿಯನ್ನು ಅಲ್ಲಿ ಮಲಗಿಸುತ್ತಾರೆ. ಶಿಶು ಜನಿಸಿದ ಕೂಡಲೇ ಹುಟ್ಟಿದ ಸಮಯವನ್ನು ಗುರುತು ಹಾಕಿ ಊರಿನ ಜೋಯಿಸರಲ್ಲಿ ಮಗುವಿನ ಜನನದ ಗಳಿಗೆಯನ್ನು, ಒಳಿತು ಕೆಡಕುಗಳನ್ನು ಕೇಳುತ್ತಾರೆ ಮತ್ತು ಮಗುವಿನ 'ಜನನ ಕುಂಡಲಿ'ಯನ್ನು ಬರೆಯಿಸುತ್ತಾರೆ. ದೇವದಾಸಿಯರು ಹೆಣ್ಣು ಮಗು ಜನಿಸಿದರೆ ಸಂಭ್ರಮಪಡುತ್ತಾರೆ. ದೇವರಿಗೆ ಅರ್ಪಿಸುವ ಮಗು. ದೇವರ ಸೇವೆ ಮಾಡಲು ದೇವರೇ ನೀಡಿದ ಮಗು ಎಂಬ ಭಾವನೆ ಇರುತ್ತದೆ.

ಹೆರಗೆಯಾದಂದಿನಿಂದ ಹನ್ನೊಂದು ದಿನಗಳವರೆಗೆ ಸೂತಕವನ್ನು ಆಚರಿಸುತ್ತಾರೆ. ಈ ಅವಧಿಯಲ್ಲಿ ಕುಟುಂಬದಲ್ಲಿ ಯಾವುದೇ ಶುಭಕಾರ್ಯಗಳು ನಡೆಯುವುದಿಲ್ಲ. ಸೂತಕವಿರುವವರು ಯಾರೂ ದೇವಸ್ಥಾನವನ್ನು ಪ್ರವೇಶಿಸುವಂತಿಲ್ಲ. ಈ ಸಂದರ್ಭದಲ್ಲಿ ದೇವಾಲಯದ ನೃತ್ಯ ಸೇವೆಗೆ ಬೇರೆ ದೇವಾಲಯಗಳಲ್ಲಿರುವ ತಮ್ಮ ಪರಿಚಯದ ದೇವದಾಸಿಯರನ್ನು ಕರೆಸುತ್ತಾರೆ. ಇದರ ಜವಾಬ್ದಾರಿ ಸೂತಕದಲ್ಲಿರುವ ದೇವದಾಸಿಯರಿಗೇ ಸಂಬಂಧಿಸಿದ್ದು. ಹನ್ನೊಂದನೆಯ ದಿನ ನಾಮಕರಣ. ಅಂದು ಪುರೋಹಿತರು ಬಂದು 'ಪುಣ್ಯಹವಾಚನ' ಮಾಡಿ ಮನೆಗೆಲ್ಲ ತೀರ್ಥ ಸಿಂಪಡಿಸುವುದರ ಮೂಲಕ ಸೂತಕ ತೆಗೆಯುವರು. ಅಂದೇ ಪುರೋಹಿತರ ಸಮ್ಮುಖದಲ್ಲಿ ನಾಮಕರಣ ಹಾಗೂ ಮಗುವನ್ನು ತೊಟ್ಟಿಲಿಗೆ ಹಾಕುವ ಸಿದ್ಧತೆಗಳು ನಡೆಯುತ್ತವೆ. ಮಗು ಹುಟ್ಟಿದ ಗಳಿಗೆ ಶುಭವಲ್ಲದಿದ್ದರೆ ಅದಕ್ಕೆ ಪರಿಹಾರ ಮಾಡುವರು. ಮಗು ಹುಟ್ಟಿದ ನಕ್ಷತ್ರಕ್ಕನುಗುಣವಾಗಿ ಯಾವ ಅಕ್ಷರದಿಂದ ಹೆಸರಿಡಬೇಕೆಂಬುದನ್ನು ಪುರೋಹಿತರು ಸೂಚಿಸುವರು. ತೊಟ್ಟಿಲಿಗೆ ಶೃಂಗಾರ ಮಾಡಿ ಪೂಜೆ ಮಾಡಿದ ಬಳಿಕ ಗೆಜ್ಜೆ ಕಟ್ಟಿದ ದೇವದಾಸಿಯರು ಶಿಶುವನ್ನು ತೊಟ್ಟಿಲಿಗೆ ಹಾಕುವರು. ನಂತರ ಎಲ್ಲರಿಗೂ ಸಿಹಿ ತಿಂಡಿ ಹಂಚುವರು. ಗಂಡು ಮಗು ಹುಟ್ಟಿದರೂ ಇಂತಹ ಆಚರಣೆ ಮಾಡುತ್ತಿದ್ದರು.

ಹೆಣ್ಣು ಮಗು ಬೆಳೆದಂತೆ ತಾಯಿಯನ್ನೇ ಅನುಸರಿಸುವುದು. ತಾಯಿ ಕುಣಿದಂತೆ ಕುಣಿಯಲು, ಹಾಡಿದಂತೆ ಹಾಡಲು ಅಭ್ಯಾಸ ಮಾಡುವುದು. ವಿದ್ಯಾಭ್ಯಾಸ ಮಾಡುವ ವಯಸ್ಸಿಗೆ ಗುರುಮಠಕ್ಕೆ ಅಥವಾ ಸಂಗೀತ, ನೃತ್ಯ ವಿದ್ವಾಂಸರಲ್ಲಿಗೆ ಕಳುಹಿಸುತ್ತಿದ್ದರು. ಶಾಲೆಗಳು ಪ್ರಾರಂಭವಾಗುವುದಕ್ಕೆ ಪೂರ್ವದಲ್ಲಿ ಶಿಕ್ಷಣವು ವಿದ್ಯೆ ಕಲಿತ ವಿದ್ವಾಂಸರ ಮನೆಗಳಲ್ಲಿ ನಡೆಯುತ್ತಿದ್ದವು. ಐಗಳ ಮಠದಲ್ಲಿ ಅಂಗಳದಲ್ಲಿ ಮರಳನ್ನು ಹಾಕಿ ಬೆರಳಿನಿಂದ ಬರೆಯುವುದು ಮೊದಲ ವಿದ್ಯೆ. ಆ ದಿನ ಸರಸ್ವತಿ ಪೂಜೆಯೊಂದಿಗೆ ಬರವಣಿಗೆ ಪ್ರಾರಂಭವಾಗುತ್ತದೆ. ತಾಯಿ ಮಗುವನ್ನು ಐಗಳ ಮಠಕ್ಕೆ ಕರೆದುಕೊಂಡು ಹೋಗಿ "ಶ್ರೀ ಗಣಾಧಿಪತಯೇ ನಮಃ" ಎಂದು ಮರಳಿನಲ್ಲಿ ಬರೆಯಿಸುತ್ತಿದ್ದಳು. ಬರವಣಿಗೆ ಕಲಿತ ಮೇಲೆ ಹಾಗ, ವೀಸ, ಬೇಳೆ, ಮುಪ್ಪಾಗ ಮೊದಲಾದ ಅಳತೆಯ ಲೆಕ್ಕಗಳನ್ನು

ಕಲಿಸುತ್ತಿದ್ದರು. ಯಕ್ಷಗಾನ ಪ್ರಸಂಗಗಳನ್ನು ಮಕ್ಕಳಿಗೆ ಹೇಳಿಕೊಡುತ್ತಿದ್ದರು. ಶಾಲೆಗೆ ಹೋಗಲು ಅನುಕೂಲತೆ ಇಲ್ಲದವರು ಮನೆಯಲ್ಲೇ ಹಾಡು, ಕಾಲು ಹೆಜ್ಜೆ, ಕೈಕಾಟಗಳನ್ನು ಮಗುವಿಗೆ ಕಲಿಸುತ್ತಿದ್ದರು. ಬಸ್ರೂರಿನಲ್ಲಿ ಹಾರ್ಮೋನಿಯಂ, ಜಲತರಂಗ, ಸಿತಾರ್, ಮದ್ದಳೆ ಇತ್ಯಾದಿಗಳನ್ನು ಕಲಿಸುವ ವಿದ್ವಾಂಸರಿರುತ್ತಿದ್ದರು. ಗಂಡುಮಕ್ಕಳು ಹಾರ್ಮೋನಿಯಂ, ತಬಲಾ ಮೊದಲಾದವುಗಳನ್ನು ಬಾರಿಸಲು ಕಲಿಯುತ್ತಿದ್ದರು.

## ೪.೧.೨ ಗೆಜ್ಜೆ ಪೂಜೆ

'ಗೆಜ್ಜೆಪೂಜೆ' ಕಾರ್ಯಕ್ರಮದ ಮೂಲಕ ಚಿಕ್ಕ ಹುಡುಗಿಗೆ ದೇವದಾಸಿ ದೀಕ್ಷೆ ನೀಡಲಾಗುತ್ತದೆ. ಈ ಕಾರ್ಯಕ್ರಮವನ್ನು ಶ್ರೀ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ಸಾರ್ವಜನಿಕ ಸಮಾರಂಭದಲ್ಲಿ ನಡೆಸುತ್ತಿದ್ದರು. ಆ ಕನ್ಯೆಯು ಬಾಲ್ಯದಿಂದಲೇ ಕಲಿತ ಸಂಗೀತ ಹಾಗೂ ನರ್ತನಗಳನ್ನು ಪ್ರದರ್ಶಿಸಿ ಅಲ್ಲಿಯ ದೇವರಿಗೆ ಅವಳನ್ನು ವಿವಾಹ ಮಾಡಿ ಅರ್ಪಿಸಲಾಗುತ್ತಿತ್ತು. ಈ ಧಾರ್ಮಿಕ ಕ್ರಿಯೆಯನ್ನು ನಡೆಸುವುದರ ಮೂಲಕ ಆಕೆಯು ದೇವದಾಸಿಯಾಗಿ ನಿಯುಕ್ತಿಗೊಳ್ಳುತ್ತಿದ್ದಳು. ಇದನ್ನು 'ರಂಗಪ್ರವೇಶ' ಎಂದೂ ಕರೆಯುತ್ತಾರೆ. ಹುಡುಗಿ ಇನ್ನೂ ಕನ್ಯೆಯಾಗಿರುವಾಗಲೇ ಅಂದರೆ ಹತ್ತು ಹನ್ನೊಂದು ವರ್ಷವಾಗುತ್ತಿರುವಾಗಲೇ ಈ ಕಾರ್ಯಕ್ರಮ ನೆರವೇರುತ್ತಿತ್ತು. ಆಕೆ 'ಮೈನೆರೆ' ಯುವ ಮೊದಲೇ ದೇವರಿಗೆ ಅರ್ಪಿತಳಾಗಬೇಕಾಗುತ್ತಿತ್ತು.

ಪ್ರಾರಂಭದಲ್ಲಿ ಹುಡುಗಿಯ ಗುರುಬಲದ ಬಗ್ಗೆ ಪುರೋಹಿತರಲ್ಲಿ ವಿಚಾರಿಸಿ 'ಗೆಜ್ಜೆಪೂಜೆ' ಗೆ ಸೂಕ್ತ ದಿನ ಗೊತ್ತು ಮಾಡುತ್ತಾರೆ. ನಂತರ ಮುದವೆಯ ಪೂರ್ವಭಾವಿ ತಯಾರಿಗಳು ನಡೆಯುತ್ತವೆ. ಊರಿನ ಪ್ರಮುಖರಿಗೆ, ಬಂಧುಗಳಿಗೆ ಮತ್ತು ಓಲಗದವರಿಗೆಲ್ಲ ಹೇಳಿಕೆ ಮಾಡುತ್ತಾರೆ. ಮದುವೆಗೆ ಮುಖ್ಯವಾಗಿ ಬೇಕಾಗುವ ಕರಿಮಣಿ, ಗೆಜ್ಜೆ, ಕಾಲುಂಗುರಗಳನ್ನು ತಯಾರಿಸುತ್ತಾರೆ. ಹುಡುಗಿಗೆ ಮತ್ತು ಬಂಧುಗಳಿಗೆ ಬೇಕಾಗುವ ಹೊಸ ಬಟ್ಟೆಗಳನ್ನು ಖರೀದಿಸುತ್ತಾರೆ. ಮನೆಗೆ ಸುಣ್ಣ ಬಣ್ಣ ಹಚ್ಚಿ ಶುಭದಿನದಂದು ಚಪ್ಪರ ಹಾಕುತ್ತಾರೆ. ಈ ಎಲ್ಲ ಕೆಲಸ ಕಾರ್ಯಗಳ ಜವಾಬ್ದಾರಿಯನ್ನು ಹುಡುಗಿಯ ಸೋದರ ಮಾವ ವಹಿಸುತ್ತಾನೆ. ಮದುವೆಯ ಹಿಂದಿನ ದಿನವೇ ನೆಂಟರಿಷ್ಟರೆಲ್ಲ ಬಂದು ಸೇರುತ್ತಾರೆ. ನಿಶ್ಚಿತ ದಿನದಂದು ದೇವಸ್ಥಾನದಲ್ಲಿ ಇವರ ವತಿಯಿಂದ ವಿಶೇಷ ಪೂಜೆ ಇರುತ್ತದೆ. ಅಂದು ಊರಿನ ದೇವದಾಸಿಯರೆಲ್ಲ ಬಂದು ಹುಡುಗಿಗೆ ಸ್ನಾನ ಮಾಡಿಸಿ, ಹೊಸ ಸೀರೆ ಉಡಿಸಿ ಅಲಂಕಾರ ಮಾಡುತ್ತಾರೆ. ನಂತರ ವಾದ್ಯಗಳ ಸಂಭ್ರಮದೊಂದಿಗೆ ದೇವಸ್ಥಾನಕ್ಕೆ ದಿಬ್ಬಣ ಹೋಗುತ್ತಾರೆ. ದಿಬ್ಬಣದಲ್ಲಿ ಮನೆಯವರೊಂದಿಗೆ ನೆಂಟರು ಇಷ್ಟ ಮಿತ್ರರೆಲ್ಲ ಭಾಗವಹಿಸುತ್ತಾರೆ. ದಿಬ್ಬಣದ ಜೊತೆಗೆ ಪೂಜೆಯ ಸಾಮಾನು, ಹಣ್ಣುಕಾಯಿ, ಗೆಜ್ಜೆ, ಕರಿಮಣಿ ಹೂಮಾಲೆಗಳನ್ನು ತೆಗೆದುಕೊಂಡು ಹೋಗುತ್ತಾರೆ.

ದಿಬ್ಬಣ ದೇವಾಲಯಕ್ಕೆ ಬಂದ ನಂತರ ಮದುವೆಯ ಧಾರ್ಮಿಕ ಕ್ರಿಯೆಗಳು ಅರ್ಚಕರಿಂದ ನಡೆಯುತ್ತದೆ. ಜೊತೆಯಲ್ಲಿ ತಂದಿರುವ ಗೆಜ್ಜೆ, ಕರಿಮಣಿ, ಕಾಲುಂಗುರಗಳನ್ನು ಪೂಜೆಗೆ ಇಡಬೇಕು. ಹೂಮಾಲೆಯನ್ನು ಅರ್ಚಕರು ದೇವರ ಕೊರಳಿಗೆ ಹಾಕುತ್ತಾರೆ. ಮುಖ್ಯ ಅರ್ಚಕರಿಂದ ದೇವರಿಗೆ ಪೂಜೆಯಾದ ಬಳಿಕ ಮುಹೂರ್ತದ ಸಮಯಕ್ಕೆ ಬ್ರಾಹ್ಮಣರಿಗೆ ಫಲದಾನ ಕೊಡುತ್ತಾರೆ. ಅರ್ಚಕರು ದೇವರ ಕೊರಳಿಗೆ ಹಾಕಿದ ಹೂಮಾಲೆಯನ್ನು ಮತ್ತು ಪೂಜೆಗಿಟ್ಟ ಕರಿಮಣಿ ಕಾಲುಂಗುರಗಳನ್ನು ದೇವದಾಸಿಯರಿಗೆ ಕೊಡುತ್ತಾರೆ. ನಂತರ ಹೂಮಾಲೆಯನ್ನು ಐದು ಮಂದಿ ದೇವದಾಸಿಯರು ಮುಟ್ಟಿ ಹುಡಿಗಿಯ ಕೊರಳಿಗೆ ಹಾಕುತ್ತಾರೆ. ಕರಿಮಣಿ ಕಟ್ಟಿ ಕಾಲುಂಗುರ ಇಡುತ್ತಾರೆ. ಪೂಜೆಗೆ ಇಟ್ಟಿರುವ ಗೆಜ್ಜೆಯನ್ನು ಐದು ಮಂದಿ ದೇವದಾಸಿಯರು ಸೇರಿ ಹುಡುಗಿಯ ಕಾಲಿಗೆ ಕಟ್ಟುತ್ತಾರೆ. ಕರಿಮಣೆಯಲ್ಲಿ ಒಂದು ತಾಳಿ ಎರಡು ಗುಂಡು ಇರುತ್ತಿತ್ತು. ಈ ಮದುವೆಯಲ್ಲಿ ಇತರ ಸಮುದಾಯಗಳ ಮದುವೆಯಲ್ಲಿ ಇರುವಂತೆ 'ಧಾರೆ' ಎರೆಯುವ ಮತ್ತು 'ಸಪ್ತಪದಿ' ತುಳಿಯುವ ಪದ್ಧತಿಯಿಲ್ಲ. ಗೆಜ್ಜೆ ಕಟ್ಟಿದ ಹುಡುಗಿಯು ದೇವರಿಗೆ ಕೈ ಮುಗಿದು ತಾಯಿ, ಅಜ್ಜಿ ಮತ್ತು ಹಿರಿಯರೆಲ್ಲರ ಆಶೀರ್ವಾದ ಪಡೆಯುತ್ತಾಳೆ. ನಂತರ ತಾಳ, ಮದ್ದಳೆ, ಹಾರ್ಮೋನಿಯಂನ ಹಿಮ್ಮೇಳದವರಿಗೆ ವಂದಿಸಿ ವಿಧ್ಯುಕ್ತವಾಗಿ 'ತಟ್ಟೆ ಚಾಕರಿ' ಸೇವೆಗೆ ಸಿದ್ಧವಾಗುತ್ತಾಳೆ.

ತಟ್ಟೆ ಚಾಕರಿ ಎಂದರೆ ನಿತ್ಯವೂ ಪೂಜೆಯಾದ ಬಳಿಕ ದೇವದಾಸಿಯರು ಹಾಡಿ ನರ್ತಿಸುವ ಸೇವೆ. ಪ್ರಾರಂಭದಲ್ಲಿ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ತ್ರಿಕಾಲ ಪೂಜೆಗೂ ದೇವದಾಸಿಯರು ಇರಬೇಕಾಗುತ್ತಿತ್ತು. ಪ್ರತಿ ದಿನ ಅಷ್ಟಾವಧಾನ ಸೇವೆಯಲ್ಲಿ ನರ್ತನ ಸೇವೆ ಎಲ್ಲರ ಮನ ಸೆಳೆಯುತ್ತಿತ್ತು. ನಿತ್ಯವೂ ಪೂಜೆಯಾದ ಬಳಿಕ ಮತ್ತು ಬಲಿಯಾಗುವಾಗ ದೇವರಿಗೆ ಮುಖ ಮಾಡಿ ಹಿಂದೆ ಹಿಂದೆ ಹೆಜ್ಜೆ ಹಾಕುತ್ತ, ದೇವರನ್ನು ಕುರಿತು ಹಾಡು ಹೇಳುತ್ತಾ ಕುಣಿಯುತ್ತಿದ್ದರು.

ತಟ್ಟೆ ಚಾಕರಿಯಲ್ಲಿ ವಿಶೇಷವಾದ 'ಆರತಿ ತಟ್ಟೆ'ಯನ್ನು ಬಳಸುತ್ತಿದ್ದರು. ಹಿತ್ತಾಳೆಯ ಆರತಿ ತಟ್ಟೆಯ ಮಧ್ಯ ಭಾಗದಲ್ಲಿ ಹಣತೆಯಾಕಾರದ 'ನೀಲಾಂಜನ'ವನ್ನು ಬೆಸೆದಿರುತ್ತಾರೆ. ನೃತ್ಯದಲ್ಲಿ ಸಾಮಾನ್ಯವಾಗಿ ಐದು ಮಂದಿ ದೇವದಾಸಿಯರು ಇರುತ್ತಿದ್ದರು. ದೇವರ ಪೂಜೆಯಾದ ಬಳಿಕ ದೇವಾಲಯದ 'ಪಾತಾಳಿ'ಯು ಈ ಆರತಿಗೆ ಎಣ್ಣೆ ಬತ್ತಿ ಹಾಕಿ ಕೊಡುತ್ತಾರೆ. ಆರತಿಯನ್ನು ಮಂಗಳಾರತಿಯಿಂದ ಅಥವಾ ದೇವರ ದೀಪದಿಂದ ಬೆಳಗಿಸಿ ನೃತ್ಯ ಮಾಡುತ್ತಾರೆ. ನೃತ್ಯದ ಪ್ರಾರಂಭದಲ್ಲಿ 'ಶ್ರೀ ವಸುಪುರಾದೀಶ ಶ್ರೀ ಮಹಾಲಿಂಗೇಶ ಚಿತ್ತಾವಧಾನ ಫರಾಕು ಸೇವಾ ಮೂಲಾಲಯ' - ಎನ್ನುವ ಪ್ರಾರ್ಥನೆಯ ಶ್ಲೋಕದೊಂದಿಗೆ ನೃತ್ಯ ಪ್ರಾರಂಭವಾಗುತ್ತಿತ್ತು. ತಟ್ಟೆ ಚಾಕರಿಯಲ್ಲಿ ನಿರ್ದಿಷ್ಟ ಹಾಡನ್ನು ಹೇಳುತ್ತಾ ದೇವರಿಗೆ ಮುಖಮಾಡಿ ಹಿಂದೆ ಹಿಂದೆ ಹೆಜ್ಜೆ ಹಾಕುತ್ತಾ ಕುಣಿಯುವುದು ವಾಡಿಕೆ. ದೇವರಿಗೆ ಬೆನ್ನು ಹಾಕಿ ಕುಣಿಯುವ ಪದ್ಧತಿಯಿಲ್ಲ.

ಹಿಮ್ಮೇಳದಲ್ಲಿ ಸೋದರ ಮಾವ ಅಥವಾ ಅಣ್ಣ, ತಮ್ಮಂದಿರು ತಾಳ, ಮದ್ದಳೆ ಮತ್ತು ಹಾರ್ಮೋನಿಯಂಗಳ ಹಿಮ್ಮೇಳ ಒದಗಿಸುತ್ತಿದ್ದರು. ಮೊದಲು ಮಹಾಲಿಂಗೇಶ್ವರನಿಗೆ, ನಂತರ ದೇವಿಯ ಸಮ್ಮುಖದಲ್ಲಿ ಈ ಸೇವೆ ನಡೆಯುತ್ತಿತ್ತು. ಮೊದಲು ಈ ಸೇವೆ ದೇವರ ತ್ರಿಕಾಲ ಪೂಜೆಗೂ ನಡೆಯುತ್ತಿತ್ತು. ನಂತರದ ದಿನಗಳಲ್ಲಿ ಸೋಮವಾರ ಮಾತ್ರ ಇರುತ್ತಿತ್ತು.

ಇದೇ ರೀತಿಯ ಆಚರಣೆಯನ್ನು ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ 'ಗಂಡಾ ಕಟ್ಟುವುದು' ಎನ್ನುತ್ತಾರೆ. ಈ ಪದ್ಧತಿಯನ್ನು 'ಪಾತರದ' ಜನಾಂಗದವರು ಆಚರಿಸಿಕೊಂಡು ಬರುತ್ತಿದ್ದರು. "ನೃತ್ಯವಾಗಲೀ, ಸಂಗೀತವಾಗಲೀ ಅದರಲ್ಲಿ ಪಾತರ ಹೆಣ್ಣು ಪ್ರವೇಶ ಪಡೆಯುವ ಸಂದರ್ಭದಲ್ಲಿ 'ಗಂಡಾ ಕಟ್ಟುವುದು' ಎಂಬ ಧಾರ್ಮಿಕ ಪದ್ಧತಿಯನ್ನು ಮಾಡುವರು. ಅವರ ಕಲಾಪರಂಪರೆಯಲ್ಲಿ ಅತ್ಯಂತ ಪ್ರಮುಖವಾದ ಧಾರ್ಮಿಕ ಕಾರ್ಯಕ್ರಮವಿದು. ಅವರಿಗೆ ಕಲೆಯ ನೃತ್ಯ, ಸಂಗೀತ ಶಿಕ್ಷಣ ನೀಡುವ ಗುರುಗಳು ಈ ಪದ್ಧತಿಯನ್ನು ನೆರವೇರಿಸುತ್ತಿದ್ದರು. ಗುರು ಶಿಷ್ಯಳನ್ನು ಶಿಷ್ಯೆ ಗುರುವನ್ನು ಒಪ್ಪಿಕೊಂಡ ಹಾಗೆ ಪ್ರತಿಜ್ಞೆಗೈಯುವ ಕಾರ್ಯಕ್ರಮವೇ 'ಗಂಡಾ ಕಟ್ಟುವುದು'. ಅವರಿಬ್ಬರ ಮಧ್ಯೆ ಇಂತಿಷ್ಟು ವರ್ಷಗಳವರೆಗೆ ಶಿಕ್ಷಣ ಸಂಬಂಧದ ಒಪ್ಪಂದವಿರುತ್ತದೆ. ಆ ಅವಧಿ ಮುಗಿಯುವವರೆಗೆ ಆಕೆ ಬೇರೆ ಗುರುವನ್ನು ಸ್ವೀಕರಿಸುವಂತಿಲ್ಲ. ಗುರು ಬೇರೆ ಶಿಷ್ಯೆಯನ್ನು ಒಪ್ಪಿಕೊಳ್ಳಬಹುದು." - (ಡಾ. ಶೈಲಜಾ ಹಿರೇಮಠ, ೧೯೯೯, ಪು. ೮೪). ಗಂಡಾ ಕಟ್ಟಿಸಿಕೊಳ್ಳುವುದು ಪಾತರದ ಬದುಕಿಗೆ ದೀಕ್ಷೆ ಆಗಿದೆ. ಇಲ್ಲಿ ನೃತ್ಯ, ಸಂಗೀತ ಶಿಕ್ಷಣ ಪಡೆಯಲು ಬರುವ ಪಾತರದ ಹುಡುಗಿಗೆ ದೀಕ್ಷೆ ಕೊಡಲಾಗುತ್ತದೆ. ಬಸ್ರೂರಿನಲ್ಲಿ ನೃತ್ಯ ಕಲಿತ ಹುಡುಗಿಗೆ ಗೆಜ್ಜೆ ಪೂಜೆಯ ಮೂಲಕ ದೇವದಾಸಿ ದೀಕ್ಷೆ ನೀಡಲಾಗುತ್ತಿತ್ತು. ಹಾಗೆಯೇ ಸವದತ್ತಿಯ ಎಲ್ಲಮ್ಮನಿಗೆ ಹುಡುಗಿಯನ್ನು ಅರ್ಪಿಸುವ ದೀಕ್ಷಾ ಸಮಾರಂಭವನ್ನು 'ದೇವರಿಗೆ ಬಿಡುವುದು' ಅಥವಾ 'ದೇವರ ಕಟ್ಟುವುದು' ಎಂದು ಹೇಳುತ್ತಾರೆ. ಈ ಕಾರ್ಯಕ್ರಮ ಎಲ್ಲಮ್ಮನ ಗುಡ್ಡದಲ್ಲಿ ಹಿರಿಯ ಜೋಗತಿಯರ ನೆರವಿನಿಂದ ನಡೆಯುತ್ತದೆ. "ಗುಡ್ಡದಲ್ಲಿ ಮುತ್ತು ಕಟ್ಟಿಸಿಕೊಳ್ಳಬೇಕೆನ್ನುವವರು ಬಂಧು ಬಾಂಧವರೊಡನೆ ಹಿರಿಯ ಜೋಗತಿಯರೊಂದಿಗೆ ಕಾಣಿಕೆ ಸಮೇತ ಪೂಜಾರಿಯ ಮನೆಗೆ ಹೋಗುವರು. ಅಲ್ಲಿ ಎಲ್ಲಮ್ಮ ಮತ್ತು ಪರಶುರಾಮನ ಪೂಜೆಯ ನಂತರ ಜೋಗತಿಯಾಗುವವರಿಗೆ ಹಿರಿಯ ಜೋಗತಿಯರು ಕೊರಳಲ್ಲಿ ಮಾಲೆ ಹಾಕುತ್ತಾರೆ. ಪೂಜಾರಿ ತಾಳಿ ಕಟ್ಟುತ್ತಾನೆ. ಆಮೇಲೆ ನಿತ್ಯ ಬದುಕಿನಲ್ಲಿ ಪಾಲಿಸಬೇಕಾದ ವಿಧಿಗಳನ್ನು ಹೇಳಿಕೊಡುತ್ತಾನೆ. ಊರಿಗೆ ಬಂದ ಮೇಲೆ ಐದು ಮನೆ ಜೋಗಾಡಿ ಐದು ದಿನ ಬಡವರಿಗೆ ಹಿರಿಯ ಜೋಗತಿಯರಿಗೆ ಊಟ ಹಾಕುವರು" - (ಡಾ. ವೀರೇಶ ಬಡಿಗೇರ, ೧೯೯೯, ಪುಟ. ೭೫).

## ೪.೧.೩ ಮೈ ನೆರೆಯುವುದು : (ಋತುಶಾಂತಿ)

ಹೆಣ್ಣಿನ ಜೀವನದ ಎರಡು ಮಹತ್ವದ ಘಟ್ಟಗಳೆಂದರೆ ಪ್ರೌಢಾವಸ್ಥೆ ಮತ್ತು ಗರ್ಭಾವಸ್ಥೆ. ಈ ಅವಧಿಯಲ್ಲಿ ಹೆಣ್ಣು ದೈಹಿಕವಾಗಿ ಮತ್ತು ಮಾನಸಿಕವಾಗಿ ಬದಲಾವಣೆಗೆ ಒಳಪಡುತ್ತಾಳೆ. ಸೃಷ್ಟಿ ಕ್ರಿಯೆಯಲ್ಲಿ ಹೆಣ್ಣು, ಗಂಡಿಗಿಂತ ಭಿನ್ನಪಾತ್ರ ವಹಿಸುವುದರಿಂದ ಹೆಣ್ಣಿನ ಬದುಕಿಗೆ ಸಂಬಂಧಿಸಿದಂತೆ ಈ ಸಂದರ್ಭವನ್ನು ವಿಶಿಷ್ಟವಾಗಿ ಪರಿಗಣಿಸಲಾಗುತ್ತದೆ. ಆದುದರಿಂದ ಪ್ರತಿಯೊಂದು ಸಮಾಜವು ಹೆಣ್ಣನ್ನು ಈ ಸಮಯದಲ್ಲಿ ಎಚ್ಚರಿಕೆಯಿಂದ ನೋಡಿಕೊಳ್ಳಲೋಸುಗ ಹಲವು ಸಂಪ್ರದಾಯಗಳನ್ನು ಹೊಂದಿದೆ.

ದೇವದಾಸಿಯಾದ ಹೆಣ್ಣು ಋತುಮತಿಯಾದ ಬಳಿಕ ಐದು ದಿನಗಳ ಸಂಭ್ರಮದ ಆಚರಣೆ ಮಾಡುತ್ತಾರೆ. ಇದನ್ನು ರೂಢಿಯಲ್ಲಿ ಹೆಣ್ಣು 'ದೊಡ್ಡವಳಾದಳು' ಎಂದು ಕರೆಯುತ್ತಾರೆ. ಮೊದಲ ದಿನ ಜಾತಿಯ ಹೆಂಗಸರನ್ನೆಲ್ಲ ಕರೆಯುತ್ತಾರೆ. ಜಾತಿಯ ಹೆಂಗಸರು ಮತ್ತು ದೇವದಾಸಿಯರು ಬಂದು ಹುಡುಗಿಯ ಕೈಯಿಂದ ಗೋಡೆಗೆ 'ಚಟ್ಟು'[೧] ಹೊಯ್ಯುತ್ತಾರೆ. ಅದಕ್ಕಾಗಿ ಅರಸಿನ ಕಡೆದು ಸುಣ್ಣ ಹಾಕಿ ಕೆಂಪು ಮಾಡಿದ ಬಣ್ಣ ತಯಾರಿಸುತ್ತಾರೆ. ಹುಡುಗಿಯು ಕೈಯನ್ನು ಆ ಬಣ್ಣದಲ್ಲಿ ಅದ್ದಿ ಗೋಡೆಗೆ ಬಡಿಯಬೇಕು. ಮೊದಲು ಒಂದು, ಕೆಳಗೆ ಮೂರು, ಮತ್ತೆ ಐದು ಹೀಗೆ ಮೇಲಿನಿಂದ ಕೆಳಗೆ ಚಟ್ಟು ಹೊಯ್ಯುತ್ತಾರೆ. ಇದಾದ ಬಳಿಕ ಹುಡುಗಿಯನ್ನು ಕೂರಿಸಿ ಐದು ಮಂದಿ ದೇವದಾಸಿಯರು ಆರತಿ ಮಾಡುತ್ತಾರೆ. ಈ ಸಂದರ್ಭದಲ್ಲಿ ಹುಡುಗಿಯು ದೇವರ ಕೋಣೆ, ಅಡಿಗೆ ಕೋಣೆಗಳಿಗೆ ಹೋಗುವಂತಿಲ್ಲ. ಮುಂದಿನ ನಾಲ್ಕು ದಿನವೂ ದಿನಕ್ಕೊಂದು ರೀತಿಯ ಕಜ್ಜಾಯ ಮಾಡಿ ತಿನಿಸಬೇಕು. ಅದರಲ್ಲಿ ಹೆಚ್ಚಾಗಿ ಬೆಲ್ಲದಿಂದ ಮಾಡಿದ ತಿನಿಸುಗಳನ್ನೇ ತಯಾರಿಸುತ್ತಾರೆ. ಸುಕುನುಂಡೆ, ಕರ್ಜಿಕಾಯಿ, ಶಾವಿಗೆ, ಮಾಲ್‌ಪುರಿಗಳನ್ನು ಮಾಡಿ ಬಡಿಸುತ್ತಾರೆ ಮತ್ತು ಬಂದವರಿಗೆಲ್ಲ ಹಂಚುತ್ತಾರೆ.

ನಾಲ್ಕನೇ ದಿನ ಸ್ನಾನ ಮಾಡಿಸಲು ಮಡಿವಾಳ್ತಿ ಬರಬೇಕು. ಮಡಿವಾಳ್ತಿಯು ಎಣ್ಣೆ ಹಚ್ಚಿ ಐದು ಕೊಡ ನೀರು ಹಾಕಿ ಸ್ನಾನ ಮಾಡಿಸಬೇಕು. ಹೆಣ್ಣು ಋತುಮತಿಯಾದಾಗ ಉಟ್ಟಿದ್ದ ಬಟ್ಟೆಯನ್ನು ಮನೆಯವರು ತೊಳೆಯುವಂತಿಲ್ಲ. ಅದನ್ನು ಮಡಿವಾಳ್ತಿಯೇ ಒಗೆದು ತೆಗೆದುಕೊಂಡು ಹೋಗಬೇಕು. ಸ್ನಾನವಾದ ಬಳಿಕ ಗೋಡೆಗೆ ಹಚ್ಚಿರುವ ಹಳೆಯ ಚಟ್ಟನ್ನು ಅಳಿಸಿ ಹೊಸ ಚಟ್ಟು ಹೊಯ್ಯುತ್ತಾರೆ. ಹುಡುಗಿಗೆ ಹೊಸ ಬಟ್ಟೆ ಉಡಿಸಿ, ತಲೆ ಬಾಚಿ, ಕುಂಕುಮವಿಟ್ಟು ಶೃಂಗರಿಸುತ್ತಾರೆ. ನಂತರ ಹುಡುಗಿಯನ್ನು ಕೂರಿಸಿ ದೇವದಾಸಿಯರು ಆರತಿ ಮಾಡಿ ಮಡಿಲು ತುಂಬುತ್ತಾರೆ.

ಐದನೆಯ ದಿನ ಪರಿವಾರದವರು, ನೆಂಟರಿಷ್ಟರು ಬರುತ್ತಾರೆ. ಬರುವಾಗ ಹಾಲು, ತುಪ್ಪ, ತಿಂಡಿ ತಿನಿಸುಗಳನ್ನು ತಂದು ಹುಡುಗಿಗೆ ಬಡಿಸಬೇಕು. ಮಧ್ಯಾಹ್ನ ನೆರೆದ ಬಂಧುಗಳಿಗೆಲ್ಲ ಊಟೋಪಚಾರದ ವ್ಯವಸ್ಥೆಯೂ ಇರುತ್ತಿತ್ತು.

ಸಾಮಾನ್ಯವಾಗಿ ಅದೇ ದಿನ ಶೋಭನ ಪ್ರಸ್ಥ ಮಾಡಿಸುವ ಪದ್ಧತಿಯೂ ಇತ್ತು. ಕೆಲವೊಮ್ಮೆ ಎರಡು ವರ್ಷಗಳ ನಂತರವೂ ಮಾಡಿಸುತ್ತಿದ್ದರು. ಶೋಭನ ಪ್ರಸ್ಥ ಆಗುವವರೆಗೆ 'ದೊಡ್ಡವಳಾದ ದೇವದಾಸಿ'ಯು ಮನೆಯ ಹೊಸ್ತಿಲ ದಾಟಿ ಎಲ್ಲೂ ಹೊರಗೆ ಹೋಗಲಿಕ್ಕಿಲ್ಲ. ದೇವಸ್ಥಾನಕ್ಕೂ ಹೋಗಬಾರದು. ಪ್ರಸ್ಥವಾದ ಬಳಿಕವೇ ದೇವರ ಸೇವೆ ಎನ್ನುವ ನಿಯಮವಿತ್ತು.

### ೪.೧.೪ ಶೋಭನ ಪ್ರಸ್ಥ

ಸಾಮಾನ್ಯವಾಗಿ ಹುಡುಗಿಯನ್ನು ಬಯಸಿದ ಶ್ರೀಮಂತರು ಹಣಕೊಟ್ಟು ಶೋಭನ ಪ್ರಸ್ಥವನ್ನು ಮಾಡಿಸುತ್ತಿದ್ದರು. ಬ್ರಾಹ್ಮಣ, ಬಂಟ, ಜೈನ, ಗೌಡ, ಸಾರಸ್ವತ ಮೊದಲಾದ ಜಾತಿಯವರೊಂದಿಗೆ ಪ್ರಸ್ಥ ನಡೆಯುತ್ತಿತ್ತು. ಹಿಂದುಳಿದ ಜಾತಿಯವರೊಂದಿಗೆ ಶೋಭನ ಮಾಡಿಸುತ್ತಿರಲಿಲ್ಲ. ಊರಿನ ಪ್ರಬಲ ವ್ಯಕ್ತಿ, ಅವನ ದೈಹಿಕ ಧಾರ್ಢ್ಯತೆ, ಶ್ರೀಮಂತಿಕೆ, ಗೌರವ ಮೊದಲಾದವುಗಳನ್ನು ನೋಡಿ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಈ ಆಯ್ಕೆಯ ಕಾರ್ಯವನ್ನು ದೇವದಾಸಿಯ ತಾಯಿ ಮಾಡುತ್ತಿದ್ದಳು. ಹುಡುಗಿಯ ಸೋದರ ಮಾವ ಮಧ್ಯವರ್ತಿಯ ಕೆಲ ಮಾಡುತ್ತಿದ್ದ.

ಶೋಭನ ಪ್ರಸ್ಥದ ದಿನ ಮನೆಯಲ್ಲಿ ಪುರೋಹಿತರು ಬಂದು ಹೋಮ ಮಾಡಬೇಕು. ಜೊತೆಯಲ್ಲಿ ಒಂದು ತೆಂಗಿನ ಕಾಯಿಯನ್ನು ಇಡುತ್ತಾರೆ. ಇಲ್ಲವೇ ತೆಂಗಿನ ಗಿಡವನ್ನು ಪುರುಷನ ಸ್ಥಾನದಲ್ಲಿ ಇಡುವುದು ಇದೆ. ಮನೆಯಲ್ಲಿ ಹವನಾದಿಗಳೆಲ್ಲ ಮುಗಿದ ಬಳಿಕ ತೆಂಗಿನ ಕಾಯಿ ಮದುಮಗಳು ಮತ್ತು ಪರಿವಾರದವರೆಲ್ಲ ಊರಿನ ಪ್ರಮುಖ ದೇವಸ್ಥಾನಕ್ಕೆ ದಿಬ್ಬಣ ಹೋಗಬೇಕು. ಅಲ್ಲಿ ಗಂಡಿನ ಪ್ರತೀಕವಾಗಿ ತಂದಿರುವ ತೆಂಗಿನ ಕಾಯಿಯನ್ನು ಪೂಜೆಗೆ ಇಡುತ್ತಾರೆ. ಅಂದು ದೇವರಿಗೆ ವಿಶೇಷ ಪೂಜೆಯ ಜೊತೆಗೆ ಪಂಚಕಜ್ಜಾಯ ಮತ್ತು ಹರಿವಾಣ ನೈವೇದ್ಯ ಆಗಬೇಕು. ಬ್ರಾಹ್ಮಣರಿಗೆ ದಕ್ಷಿಣೆ, ಫಲದಾನ ಕೊಡುತ್ತಾರೆ. ಪೂಜೆಯಾದ ಬಳಿಕ ಮಂತ್ರಿಸಿದ ತೆಂಗಿನ ಕಾಯಿಯನ್ನು ಮದುಮಗಳಿಗೆ ನೀಡುತ್ತಾರೆ. ಆ ಕಾಯಿ ಮದುಮಗನಂತೆ ಸದಾ ಆಕೆಯ ಜೊತೆಗಿರಲೇಬೇಕು. ನಂತರ ಐದು ಮಂದಿ ದೇವದಾಸಿಯರು ಮದುಮಗಳನ್ನು ಕಾಯಿಯ ಜೊತೆಗೆ ಕೂರಿಸಿ ಆರತಿ ಬೆಳಗುತ್ತಾರೆ. ಈ ಧಾರ್ಮಿಕ ವಿಧಿಗಳೆಲ್ಲ ಮುಗಿದ ಮೇಲೆ ದೇವಸ್ಥಾನದಲ್ಲಿ ಬ್ರಾಹ್ಮಣರಿಗೆ ಮತ್ತು ಉಳಿದವರಿಗೆ ಊಟದ ವ್ಯವಸ್ಥೆ ಇರುತ್ತಿತ್ತು. ಮದುಮಗಳಾದ ದೇವದಾಸಿಯು ತೆಂಗಿನ ಕಾಯಿಯ ಜೊತೆಗೆ ಊಟ ಮಾಡಬೇಕು. ಈ ಕಾರ್ಯಕ್ರಮದ ಖರ್ಚುವೆಚ್ಚವನ್ನೆಲ್ಲ ಅವಳನ್ನು ಬಯಸುವ ಧನಿಕ ಕೊಡಬೇಕಾಗುತ್ತದೆ.

ಆದಿನ ರಾತ್ರಿ ತೆಂಗಿನ ಕಾಯಿಯ ಜೊತೆಗೆ ಮದುಮಗಳನ್ನು ಶಯನಾಗಾರಕ್ಕೆ ಕಳುಹಿಸುತ್ತಾರೆ. ದೇವದಾಸಿಯು ಆ ಫಲವನ್ನೇ ಪರದೈವವೆಂದು ತಿಳಿದಿರಬೇಕು. ಆ ಫಲವನ್ನು ನೆಲದ ಮೇಲಿಡಬಾರದು ಎಂಬ ನಂಬಿಕೆಯಿದೆ.

ರಾತ್ರಿ ತೆಂಗಿನ ಕಾಯಿಯನ್ನು ಹತ್ತಿರವಿಟ್ಟುಕೊಂಡು ಮಲಗಿ ಮರುದಿನ ಬೆಳಿಗ್ಗೆ ದೇವಾಲಯದ 'ಕ್ಷೇತ್ರಪಾಲ'ನಿಗೆ ಒಪ್ಪಿಸಿ ಬರಬೇಕು. ನಂತರದ ದಿನಗಳಲ್ಲಿಯೇ ಬಯಸಿ ಬಂದವನನ್ನು ಕೂಡಬೇಕು ಮತ್ತು ಪತಿಯೆಂದು ಮನಸಾ ಸ್ವೀಕರಿಸಬೇಕು.

### ೪.೧.೫ ಮರಣ ಸಂಸ್ಕಾರ

ಸೃಷ್ಟಿಯ ಪ್ರತಿಯೊಂದು ಜೀವಿಗೂ ಸಾವು ಅನಿವಾರ್ಯ. ಇದು ವ್ಯಕ್ತಿಯನ್ನು ಜಗತ್ತಿನ ಸಂಬಂಧಗಳಿಂದ ಮುಕ್ತಿಗೊಳಿಸುತ್ತದೆ. ಮೃತಪಟ್ಟ ವ್ಯಕ್ತಿಯ ಶವವನ್ನು ಸ್ವ-ಜಾತಿಯ ಬಂದುಗಳೆಲ್ಲ ಸೇರಿ ಸಂಸ್ಕಾರ ಮಾಡಿ ಗೌರವದಿಂದ ಕಳುಹಿಸಿಕೊಡುತ್ತಾರೆ. ಈ ಸಂದರ್ಭದಲ್ಲಿ ಪ್ರತಿಯೊಂದು ಜನಾಂಗವೂ ತನ್ನದೇ ಆದ ಸಂಪ್ರದಾಯ ಹೊಂದಿದೆ. ಬಯಲು ಸೀಮೆಯ ಕೆಲವು ಭಾಗಗಳಲ್ಲಿ ಬ್ರಾಹ್ಮಣರನ್ನು ಹೊರತುಪಡಿಸಿ ಇತರ ಜಾತಿಗಳಲ್ಲಿ ಶವವನ್ನು ಹೂಳುವ ಪದ್ಧತಿ ಇದೆ. ಕರಾವಳಿ ಪ್ರದೇಶದಲ್ಲಿ ಹಿಂದೂ ಸಂಪ್ರದಾಯದಲ್ಲಿ ಹರಿಜನರನ್ನು ಹೊರತುಪಡಿಸಿ ಉಳಿದ ಎಲ್ಲ ಪಂಗಡಗಳಲ್ಲೂ ಶವವನ್ನು ಸುಡುವ ಸಂಪ್ರದಾಯವಿದೆ. 'ಗೆಜ್ಜೆಕಟ್ಟಿದ' ದೇವದಾಸಿಯರು ನಿತ್ಯ ಸುಮಂಗಲೆಯರಾದುದರಿಂದ ಸತ್ತಮೇಲೆ ಮೋಕ್ಷ ಹೊಂದುತ್ತಾರೆ ಎನ್ನುವ ನಂಬಿಕೆಯಿದೆ. ಇವರಲ್ಲಿ ಅಂತಿಮ ಸಂಸ್ಕಾರವು ಹಿಂದೂ ಪದ್ಧತಿಯಂತೆ ನಡೆಯುತ್ತದೆ. ಸ್ವಲ್ಪಮಟ್ಟಿನ ವೈದಿಕ ಸಂಪ್ರದಾಯದ ಪ್ರಭಾವವೂ ಕಂಡುಬರುತ್ತದೆ. ದೇವದಾಸಿಯು ಸತ್ತರೆ ಅವಳ ಮಗ, ಮಗನಿಲ್ಲದಿದ್ದರೆ ಅಕ್ಕ ತಂಗಿಯ ಮಕ್ಕಳು ಅಂತ್ಯ ಸಂಸ್ಕಾರವನ್ನು ಮಾಡುತ್ತಾರೆ. ಗಂಡಸು ಸತ್ತರೆ ಅಳಿಯ ಅಂತ್ಯ ಕ್ರಿಯೆಯನ್ನು ಮಾಡುತ್ತಿದ್ದ. ಸತ್ತ ವ್ಯಕ್ತಿಯ 'ಶವ ದಹನ' ಅದೇ ದಿನ ಮಾಡಬೇಕೆಂಬ ನಿಯಮವಿದೆ.

ಪ್ರಾಣ ಹೋಗುವ ಮುನ್ನ ವ್ಯಕ್ತಿಯನ್ನು ಮಲಗುವ ಕೋಣೆಯಿಂದ ಎತ್ತಿಕೊಂಡು ಬಂದು ಹೊರಗೆ ಜಗುಲಿಯಲ್ಲಿ ಮಲಗಿಸುವರು. ಪ್ರಾಣ ಮನೆಯ ಒಳಗೆ ಹೋಗಬಾರದೆನ್ನುವ ನಂಬಿಕೆಯಿದೆ.[೨] ವ್ಯಕ್ತಿಯು ಕೊನೆಯ ಉಸಿರು ಎಳೆಯುವಾಗ ಬಾಯಿಗೆ ಗರಿಕೆಯ ಮೂಲಕ ನೀರು ಬಿಡುವರು. ಆತ್ಮೀಯರು ಬಾಯಿಗೆ ನೀರು ಬಿಡುವವರೆಗೂ ಪ್ರಾಣ ಹೋಗುವುದಿಲ್ಲ ಎನ್ನುವ ನಂಬಿಕೆಯಿದೆ. ವ್ಯಕ್ತಿಯು ಮೃತಪಟ್ಟ ಕೂಡಲೇ ಆ ಕುಟುಂಬಕ್ಕೆ ಸೂತಕ ಸಂಭವಿಸುವುದು. ಮುಂದಿನ ಹನ್ನೊಂದು ದಿನಗಳವರೆಗೆ ಅವರು ಶುಭ ಕಾರ್ಯದಲ್ಲಿ ಭಾಗವಹಿಸುವಂತಿಲ್ಲ.

ವ್ಯಕ್ತಿಯು ಮೃತಪಟ್ಟಿರುವುದು ಖಚಿತವಾದ ಮೇಲೆ ಕುಟುಂಬಿಕರು, ನೆರೆಹೊರೆಯವರು ಸಾವಿನ ಮನೆಗೆ ಧಾವಿಸಿ ಬರುವರು. ಕುಟುಂಬದ ಹಿರಿಯ ದೇವದಾಸಿಯಾಗಿದ್ದರೆ 'ಡೋಲು' ಮತ್ತು ಓಲಗದವರನ್ನು ಕರೆಸಿ ಶೋಕ ಗೀತೆ[೩] ನುಡಿಸುವರು. ಬಳಿಕ ಶವಕ್ಕೆ ಬಿಳಿ ಬಟ್ಟೆ ಹೊದಿಸಿ ತಲೆಭಾಗದಲ್ಲಿ ಕಾಯಿ ಕಡಿ ದೀಪ ಇಡುವರು. ನೆರೆದಿರುವ ಆತ್ಮೀಯರು. ಮೃತ ವ್ಯಕ್ತಿಯ ಮೇಲಿನ ಗೌರವ ಮತ್ತು ಪೂಜ್ಯ ಭಾವನೆಯಿಂದ ಕಾಲು ಮುಟ್ಟಿ

ನಮಸ್ಕರಿಸುತ್ತಾರೆ. ನಂತರ ಕುಟುಂಬಿಕರು ದೇವದಾಸಿಯ ಶವಕ್ಕೆ ಅರಿಸಿನ ಹಚ್ಚಿ, ತುಳಸೀ ಕಟ್ಟೆಯ ಸಮೀಪ ಮಲಗಿಸಿ ಸ್ನಾನ ಮಾಡಿಸುವರು. ಆಮೇಲೆ ಶವಕ್ಕೆ ಸೀರೆ ಉಡಿಸಿ, ಹಣೆಗೆ ಕುಂಕುಮವಿಟ್ಟು, ಹೂಮುಡಿಸಿ, ಶೃಂಗಾರ ಮಾಡಿ 'ಚಟ್ಟ'ದಲ್ಲಿ ಮಲಗಿಸುವರು.

ಮಹಾಲಿಂಗೇಶ್ವರನಿಗೆ ತನ್ನನ್ನು ಅರ್ಪಿಸಿಕೊಂಡ ದೇವದಾಸಿ ಸತ್ತ ದಿನ ಅವಳ ದಹನ ಕ್ರಿಯೆ ಆಗುವವರೆಗೆ ದೇವರ ಪೂಜೆ ನಡೆಯುವಂತಿಲ್ಲ. ಅದಕ್ಕಾಗಿ ಶೀಘ್ರವಾಗಿ ಅಂತಿಮ ಯಾತ್ರೆಯ ಸಿದ್ಧತೆ ನಡೆಸುವರು. ಶವ ದಹನಕ್ಕೆ ನಿರ್ದಿಷ್ಟಪಡಿಸಿದ ಸ್ಥಳದಲ್ಲಿ ಕುಟುಂಬಿಕರೆಲ್ಲ ಸೇರಿ ಕಟ್ಟಿಗೆ ಕೂಡಿ 'ಕಾಟ'[೪] ಸಿದ್ಧಪಡಿಸುವರು. ಶವವನ್ನು ಮಲಗಿಸಿ ಅಲಂಕಾರ ಮಾಡಿರುವ 'ಚಟ್ಟ'ಕ್ಕೆ ದೇವದಾಸಿಯ ಗಂಡು ಮಕ್ಕಳು ಮತ್ತು ತಮ್ಮಂದಿರು ಸೇರಿ ಹೆಗಲು ಕೊಡುವರು. ಮೃತಳ ಹಿರಿಯ ಮಗ ಹೆಣದ ಪಾದ ಪೂಜೆ ಮಾಡಿ ಅಗ್ನಿಸ್ಪರ್ಶ ಮಾಡುವನು. ಇದಕ್ಕೆ 'ಕೊಳ್ಳಿ ಇಡುವುದು' ಎನ್ನುತ್ತಾರೆ. ಹೆಂಗಸರು ಸ್ಮಶಾನಕ್ಕೆ ಹೋಗುವ ಪದ್ಧತಿ ಇಲ್ಲ. ಗಂಡಸರು ಹೆಣ ಸುಟ್ಟು ಸ್ನಾನ ಮಾಡಿ ಬಂದ ಬಳಿಕ ಹೆಣ ಹೊತ್ತವರ ಹೆಗಲಿಗೆ ತಾಯಿ, ಅಥವಾ ಅಕ್ಕ ತೀರಿಹೋದರೆ ತಂಗಿ, ಇಲ್ಲವೆ ಸೊಸೆ ಹಾಲು ತಾಗಿಸಿ ಬಾಳೆಹಣ್ಣು, ಬೆಲ್ಲ ತಿನ್ನಲು ಕೊಡಬೇಕು. ಆ ಬಳಿಕ ಸಾವಿನ ಮನೆಯಲ್ಲಿ ಗಂಜಿ ಊಟ ಇರುತ್ತದೆ. ಸಾವು ಸಂಭವಿಸಿದ ಬಳಿಕ ಹೆಣ ತೆಗೆಯುವವರೆಗೆ ಮನೆಯಲ್ಲಿ ಒಲೆ ಹಚ್ಚುವ ಪದ್ಧತಿ ಇಲ್ಲ.

ವ್ಯಕ್ತಿಯು ಮೃತಪಟ್ಟ ಮೂರನೆಯ ದಿನದಿಂದ ಅಪರ ಕ್ರಿಯೆಗಳು ಪ್ರಾರಂಭವಾಗುತ್ತವೆ. ಮೂರನೆಯ ದಿನ ಸ್ಮಶಾನದಲ್ಲಿ ಬೂದಿಯನ್ನೆಲ್ಲ ರಾಶಿ ಮಾಡಿ ಗುಡ್ಡೆ ಹಾಕಿ ಕಲಶ ಇಡುವರು. ಇದನ್ನು ತುಳುನಾಡಿನಲ್ಲಿ 'ದೂಳೊಪ್ಪ' ಎಂದು ಕರೆಯುತ್ತಾರೆ. ಆ ದಿನದ ಕಾರ್ಯಕ್ರಮಕ್ಕೆ ದಾಯಾದಿಗಳು ಮತ್ತು ರಕ್ತಸಂಬಂಧಿಗಳು ಮಾತ್ರ ಭಾಗವಹಿಸುವರು. ಐದನೆಯ ದಿನ ಕ್ರಿಯೆ ಹಿಡಿಯುವುದು.[೫] ಮೃತ ವ್ಯಕ್ತಿಯ ಗಂಡುಮಕ್ಕಳು ಕ್ರಿಯೆ ಹಿಡಿಯುತ್ತಾರೆ. ಅಥವಾ ಮೊದಲನೆಯ ಮಗನೊರ್ವನೇ ಕ್ರಿಯೆ ಹಿಡಿಯಬಹುದು. ಕ್ರಿಯೆ ಹಿಡಿಯುವವರು ತಲೆಕೂದಲು ತೆಗೆಯುವ ಪದ್ಧತಿಯಿದೆ. ಅಂದು ಸ್ಮಶಾನದಲ್ಲಿರುವ ಬೂದಿ ಮತ್ತು ಅಸ್ಥಿಯನ್ನೆಲ್ಲ ನದಿಯಲ್ಲಿ ವಿಸರ್ಜನೆ ಮಾಡುವರು. ಸ್ಮಶಾನದಲ್ಲಿ ಕಲಶ ಇಟ್ಟು ಬೊಂಡ, ದೀಪ ಇಡುವರು. ನಂತರ ಮಕ್ಕಳು ಮತ್ತು ಕುಟುಂಬಿಕರೆಲ್ಲ ನದಿಯಲ್ಲಿ ಮುಳುಗು ಹಾಕುವ ಪದ್ಧತಿ ಇದೆ. ಕ್ರಿಯೆ ಹಿಡಿದವನು, ಸತ್ತ ವ್ಯಕ್ತಿಯು ಪ್ರಾಣಬಿಟ್ಟ ಜಾಗದಲ್ಲಿ ರಾತ್ರಿ ಮಲಗಬೇಕು. ಆತ ಹೊರಗೆಲ್ಲೂ ತಿರುಗಾಡಲು ಹೋಗುವಂತಿಲ್ಲ. ಈ ರೀತಿಯ ಪದ್ಧತಿ ದೇವದಾಸಿಯರಲ್ಲಿ ಮಾತ್ರ ಕಂಡುಬರುತ್ತದೆ.

ಒಂಬತ್ತನೆಯ ದಿನ ಸ್ಮಶಾನದಲ್ಲಿ 'ಎಡೆ' ಹಾಕಿ 'ಸೊಡ್ಲ್ ಗುಡ್ಡಿ' ಮಾಡುವರು. ತೆಂಗಿನ ಹೆಣೆದ ಮೂರು ಗರಿಕೆಗಳನ್ನು ಒಂದಕ್ಕೊಂದು ತಾಗಿಸಿ ನಿಲ್ಲಿಸುವರು. ನಂತರ ಆ ಜಾಗದಲ್ಲಿ ತುಳಸಿ ನೆಟ್ಟು ಅನ್ನ ಮಾಡಿ ಬಡಿಸಿ ದೀಪ ಇಡಬೇಕು. ನಂತರ ಸ್ಮಶಾನಕ್ಕೆ ಹೋಗುವ ಅವಶ್ಯಕತೆ ಇಲ್ಲ.

ಹನ್ನೊಂದನೆಯ ದಿನಕ್ಕೆ ಸೂತಕ ಮುಗಿಯುತ್ತದೆ. ಅಂದು ಮನೆಯ ಬಟ್ಟೆಯನ್ನೆಲ್ಲ ಒಗೆದು ಶುದ್ಧಮಾಡುತ್ತಾರೆ. ನಂತರ ವೈದಿಕರು ನದೀ ತಟದಲ್ಲಿ ಹವನಾದಿಗಳನ್ನು ಮಾಡಿ ಕ್ರಿಯೆ ಹಿಡಿದ ವ್ಯಕ್ತಿಗಳಿಂದ 'ಪಿಂಡ' ಹಾಕಿಸುತ್ತಾರೆ. ಪಿಂಡ ಎಂದರೆ ಅನ್ನದಿಂದ ಉಂಡೆ ಮಾಡಿ ಎಲೆಯಲ್ಲಿ ಗರಿಕೆಯ ಮೇಲಿಟ್ಟು, ಮೃತ ವ್ಯಕ್ತಿಯ ಹೆಸರಿನಲ್ಲಿ ಅದಕ್ಕೆ ಎಳ್ಳು ನೀರಿನಿಂದ ತರ್ಪಣ ಕೊಡಬೇಕು. ಇದು ಮೃತ ವ್ಯಕ್ತಿಯ ಪ್ರೇತಾತ್ಮವು ಮೋಕ್ಷ ಹೊಂದಲೆಂದು ಮಾಡುವ ಕಾರ್ಯಕ್ರಮ. ನಂತರ ನೆರೆದವರೆಲ್ಲ ನದಿಯಲ್ಲಿ ಮುಳುಗು ಹಾಕಿ ಅಲ್ಲಿಂದ ಕಲಶಾದಿಗಳನ್ನು ಮನೆಗೆ ತಂದು ಪ್ರೋಕ್ಷಿಸುತ್ತಾರೆ. ಈ ಕಾರ್ಯಕ್ರಮವನ್ನು 'ಬೊಜ್ಜ' ಎನ್ನುತ್ತಾರೆ. ಆ ದಿನ ಬಳೆಗಾರ ಬಂದ ಕಾಯಿ ಮಂತ್ರಿಸಿ ದೇವಿ ದೇವಾಲಯಕ್ಕೆ ತೆಗೆದುಕೊಂಡು ಹೋಗಬೇಕು. ಶವ ಸಂಸ್ಕಾರದಲ್ಲಿ ಭಾಗವಹಿಸಿದವರೆಲ್ಲ ಇಂದು ಆಗಮಿಸುತ್ತಾರೆ. ನಂತರ ಹೊರಗೆ ಅಡುಗೆ ಮಾಡಿ ಎಲೆಯಲ್ಲಿ ಬಡಿಸಿ ಕಾಗೆಗೆ ಇಡುತ್ತಾರೆ. ಅಂದರೆ ಮೃತನ ಪ್ರೇತಾತ್ಮವು ಕಾಗೆಯ ರೂಪದಲ್ಲಿರುತ್ತದೆ ಎನ್ನುವ ನಂಬಿಕೆಯಿದೆ. ಕಾಗೆ ಅನ್ನ ತಿನ್ನದಿದ್ದರೆ ಮೃತನಿಗೆ ಸದ್ಗತಿಯಾಗಲಿಲ್ಲವೆಂದರ್ಥ.

ಹನ್ನೆರಡನೇ ದಿನ ಸಮಾರಾಧನೆ ಮಾಡಿ ಕುಟುಂಬದವರಿಗೆ ಆತ್ಮೀಯರಿಗೆಲ್ಲ ಊಟ ಹಾಕಬೇಕು. ಇದನ್ನು 'ವೈಕುಂಠ ಸಮಾರಾಧನೆ' ಎನ್ನುತ್ತಾರೆ. ದೇವದಾಸಿಯ ಕೊನೆಯ ಈ ಸಮಾರಾಧನೆ ದೇವಸ್ಥಾನದಲ್ಲಿಯೇ ನಡೆಯುತ್ತಿತ್ತು. ಈ ಕಾರ್ಯಗಳಿಗೆ ದೇವಸ್ಥಾನದ ವತಿಯಿಂದ ಸಹಕಾರ ನೀಡುತ್ತಿದ್ದರು.

ಹನ್ನೆರಡು ದಿನಗಳ ಅಂತ್ಯಕ್ರಿಯೆ ಮುಗಿದ ಬಳಿಕ ಪ್ರತಿ ತಿಂಗಳು ಮಾಸಿಕ ಮಾಡಿ ಕಾಗೆಗೆ ಅನ್ನ ಇಡಬೇಕು. ಪ್ರತಿ ತಿಂಗಳು ಮಾಸಿಕ ಮಾಡಿ ವರ್ಷ ಪೂರ್ತಿಯಾದಾಗ 'ವರ್ಷಾಂತಿಕ' ಮಾಡುತ್ತಿದ್ದರು.

ಈ ದಿನ ಅನುಕೂಲವಿರುವವರು ಸಂಬಂಧಿಗಳನ್ನು ಕರೆದು ಊಟ ಹಾಕುತ್ತಾರೆ. ಬಳಿಕ ಪ್ರತಿವರ್ಷವೂ ಬೇಸಿಗೆಯಲ್ಲಿ 'ಜಕಣೆ'[೬] ಮಾಡಿ ಸತ್ತವರಿಗೆ 'ಎಡೆ' ಇಡುವ ಪದ್ಧತಿ ಇದೆ. ಹೀಗೆ ದೇವದಾಸಿಯರ ಅಂತಿಮ ಸಂಸ್ಕಾರದಲ್ಲಿ ವೈದಿಕ ಮತ್ತು ಜಾನಪದ ಆಚರಣೆಗಳು ಸಮ್ಮಿಶ್ರವಾಗಿವೆ.

### ೪.೨. ವಾರ್ಷಿಕಾವರ್ತನ ಆಚರಣೆಗಳು

'ಮಹಾಲಿಂಗೇಶ್ವರ' ದೇವಸ್ಥಾನದ ವಾರ್ಷಿಕ ಜಾತ್ರೆಯು ವರ್ಷದ ಆರಂಭದಲ್ಲಿ ಬರುತ್ತದೆ. ಚೈತ್ರ ಶುದ್ಧ ನವಮಿಗಳಿಂದ ಹತ್ತು ದಿನಗಳವರೆಗೆ ನಡೆಯುವ ವಿವಿಧ ಉತ್ಸವಗಳು, ಪ್ರತಿಯೊಂದು ಕೇರಿಗಳಲ್ಲಿ ಒಂದೊಂದು ದಿನ ನಡೆಯುವ 'ಪೂಜಾ ಕಾರ್ಯ'ಗಳು, ನಗರೋತ್ಸವ, ಓಕುಳಿ, ತಪ್ಪೋತ್ಸವ, ಇತ್ಯಾದಿಗಳು ಒಟ್ಟು ಊರಿನ ಸಾಂಸ್ಕೃತಿಕ ಸಾಮರಸ್ಯ - ಏಕತೆಯನ್ನು ಸಾಧಿಸುವ ಸಾಧನಗಳಾಗಿವೆ. ಜಾತ್ರೆಯ ಈ ವಿಶೇಷ ಸಂದರ್ಭಗಳಲ್ಲಿ

ಏಳು ದಿನ ಏಳು ಕೇರಿಗಳ ಕಟ್ಟೆ ಪೂಜೆಗೆ ದೇವರು ಹೋಗುವಾಗ ಮುಂಭಾಗದಲ್ಲಿ ವಾಲಗದವರು, ಅವರ ಹಿಂದೆ ದೇವದಾಸಿಯರು ಇರುತ್ತಿದ್ದರು. ದೇವದಾಸಿಯರ ಹಿಂದೆ 'ಜೀವಟಿಗೆ'ಯವರು ಎಡ, ಬಲ ಭಾಗಗಳಲ್ಲಿ ಬೆಳ್ಳಿಯ ಕಟ್ಟಿಗೆ ಕೋಲು ಹಿಡಿಯುವವರು, ಮತ್ತು ದೇವರ ವಾಹನ ಇರುತ್ತಿತ್ತು. ದೇವರ ಹಿಂದೆ ಅರ್ಚಕ ವೃಂದ ಮತ್ತು ಊರಿನ ನಾಗರಿಕರು ಇರುತ್ತಿದ್ದರು. ದೇವದಾಸಿಯರು ಹಾಡಿ ಕುಣಿಯುವಾಗ ಹಿಮ್ಮೇಳವಲ್ಲದೆ ಬೇರೆ ಯಾವ ವಾದನಗಳೂ ಇರುತ್ತಿರಲಿಲ್ಲ. ಮಹಾಲಿಂಗೇಶ್ವರ ದೇವರ ಉತ್ಸವಕ್ಕೆ ಗರ್ನ ಕಟ್ಟೆ (ಧ್ವಜಾರೋಹಣ ಮಾಡಿ) ಇಳಿಸುವವರೆಗೆ ದೇವದಾಸಿಯರು ಶುದ್ಧಾಚಾರದಲ್ಲಿರಬೇಕಿತ್ತು.

ನವಮಿಯಂದು 'ಗರ್ನ ಕಟ್ಟೆ' (ಧ್ವಜಾರೋಹಣ) ಏರಿಸಿದ ಬಳಿಕ ರಾತ್ರಿ 'ಕಟ್ಟೆ ಪೂಜೆ'ಗಳ ಆರಂಭ. ಒಂದೊಂದು ದಿನ ಒಂದೊಂದು ಕಟ್ಟೆಯಲ್ಲಿ 'ಮಹಾಲಿಂಗೇಶ್ವರನ' ಸವಾರಿ. ಒಂದನೇ ದಿನ ಮಯೂರವಾಹನವಾಗಿ ವೆಂಕಟರಮಣ ದೇವಸ್ಥಾನದಲ್ಲಿ 'ಕೋಳ್ಕೆರೆ ಕಟ್ಟೆ', 'ಗುಡಿಗಾರರ ಕಟ್ಟೆ', ಮತ್ತು 'ಹಲರ ಕಟ್ಟೆ'ಗಳಲ್ಲಿ ಪೂಜೆ ಅನಂತರ ಅಷ್ಟಾವಧಾನ ಸೇವೆಯಲ್ಲಿ ನೃತ್ಯ ಸೇವೆ. ಎರಡನೇ ದಿನ 'ಬಸದಿ ಬಾಗಿಲು ಕಟ್ಟೆ' ಇದನ್ನು 'ಸುನಾರಿ ಕಟ್ಟೆ' ಎಂದೂ ಕರೆಯುತ್ತಾರೆ. ಅಂದು 'ಫನ್ನಗವಾಹನವಾಗಿ' ದೇವರನ್ನು ಮೆರವಣಿಗೆ ಮಾಡುತ್ತಾರೆ. ಮೂರನೇ ದಿನ 'ಮಂಡಿಕೇರಿ ಕಟ್ಟೆ' ಅಥವಾ 'ನಿಲ್ ಸಲ್ ಕಟ್ಟೆ', ಮತ್ತು 'ವೆಂಕಟರಾಯರ ಕಟ್ಟೆ'ಗಳಿಗೆ 'ವೃಷಭ' ವಾಹನನಾಗಿ ಹೋಗಬೇಕು. ನಾಲ್ಕನೆಯ ದಿನ 'ಚಿನಿವಾರ ಕಟ್ಟೆ' ಮತ್ತು 'ಸೋಮವಾರ ತೊಪ್ಪಲ್ ಕಟ್ಟೆ'ಗಳಲ್ಲಿ 'ಕುಂಜರವಾಹನನಾಗಿ ಪಯಣ ಐದನೆಯ ದಿನ 'ಅಶ್ವವಾಹನ'ನಾಗಿ 'ಮೂಡುಕೇರಿ ತೊಪ್ಪಲ್ ಕಟ್ಟೆ', 'ಶಂಕರ ಅಡಿಗಳ ಮನೆ ಕಟ್ಟೆ', ಆರನೆಯ ದಿನ 'ಸಿಂಹ ವಾಹನ'ನಾಗಿ 'ಕರಣಿಕರ ಕಟ್ಟೆ', 'ಪುರಾಣಿವೆಳಲು ಕಟ್ಟೆ', 'ಹೇರಿಕುದ್ರು ಕಟ್ಟೆ'ಗಳಲ್ಲಿ ಪೂಜೆ ವಸಂತ.

ಈ ಎಲ್ಲ ಕಟ್ಟೆಗಳಲ್ಲಿ ದೇವರ ಉತ್ಸವ ಮೂರ್ತಿಯನ್ನು ಕೂರಿಸಿ ಪೂಜೆ ಮತ್ತು ಕಟ್ಟೆ ವಸಂತ ನಡೆಯುತ್ತಿತ್ತು. ನಂತರ ಅಷ್ಟಾವಧಾನ ಸೇವೆಯಲ್ಲಿ ನೃತ್ಯ ಸೇವೆಯೂ ದೇವದಾಸಿಯರಿಂದ ನಡೆಯುತ್ತಿತ್ತು. ಪ್ರತಿಯೊಂದು ಕಟ್ಟೆಗಳಲ್ಲೂ ಆಯಾ ದೇವರನ್ನು ಹೊಗಳುವ ಹಾಡು ಹೇಳಿ ನರ್ತಿಸುತ್ತಿದ್ದರು. ಕಟ್ಟೆ ಪೂಜೆಗಳಲ್ಲಿ ವಿಶೇಷವಾಗಿ 'ಪಂಚ ಕಜ್ಜಾಯ' ಮತ್ತು 'ಪಾನಕದ ನೈವೇದ್ಯ' ಇರುತ್ತದೆ. ಅದನ್ನು ಬಂದವರೆಲ್ಲರಿಗೂ ಹಂಚುತ್ತಾರೆ. ಪ್ರತಿಯೊಂದು ಕಟ್ಟೆಯ ಪೂಜೆಯೂ ಒಂದೊಂದು ಮನೆತನಗಳಿಗೆ ಸಂಬಂಧಿಸಿರುತ್ತದೆ. ನಿರ್ದಿಷ್ಟ ಪಡಿಸಿದ ಕಟ್ಟೆ ಪೂಜೆಯ ಖರ್ಚುಗಳೆಲ್ಲ ಆ ಮನೆತನಗಳಿಗೆ ಸಂಬಂಧಿಸಿದ್ದು. ಕಟ್ಟೆ ಪೂಜೆ ಮುಗಿದ ಬಳಿಕ ದೇವರು ನಗರಕ್ಕೆ ಒಂದು ಸುತ್ತು ಬಂದು, ಮನೆ ಮನೆಗಳ ಆರತಿ ಪಡೆಯುವುದು ಈಗಲೂ ರೂಢಿಯಲ್ಲಿದೆ.

ಏಳನೆಯ ದಿನ 'ಚಿತ್ರ ಪೂರ್ಣಿಮೆ'ಯಂದು 'ಬ್ರಹ್ಮರಥೋತ್ಸವ' ಮಧ್ಯಾನ್ಹ ರಥಾರೋಹಣವಾದ ಬಳಿಕ ಸಂಜೆ ರಥ ಬೀದಿಯಲ್ಲಿ ದೇವಸ್ಥಾನಕ್ಕೆ ಒಂದು ಸುತ್ತು ರಥ ಎಳೆಯುತ್ತಾರೆ. ಎಂಟನೇ ದಿನ 'ಚೂರ್ಣೋತ್ಸವ',

‘ಓಕುಳಿ’ ಮತ್ತು ‘ಅವಬ್ರುತ ಸ್ನಾನ’ ಅಂದು ರಾತ್ರಿಯ ‘ಪ್ರದೋಶ’ ಮಂಗಳಾರತಿಯಾದ ಬಳಿಕ ‘ಹಲರ ಶೆಟ್ಟಿ’ ಮತ್ತು ಬಂಟ ಜಾತಿಯವರು ಸೇರಿ ‘ಏಳು ಕೇರಿ’ ಮೆರೆಯುವ ಪದ್ಧತಿಯಿದೆ. ‘ಹಲರು’[೮] ಎಂದರೆ ಬಂಟ ಜನಾಂಗದವರು. ಇವರನ್ನು ‘ಶೆಟ್ಟಿ’ ಎಂದೂ ‘ಒಕ್ಕಲಿಗ’ ರೆಂದೂ ಕೂಡಾ ಕರೆಯುತ್ತಾರೆ. ಬಸ್ರೂರಲ್ಲಿ ಈ ಜನಾಂದವರಿಗೊಬ್ಬ ಯಜಮಾನ ಇರುತ್ತಾನೆ. ಓಕುಳಿ ದಿನ ರಾತ್ರಿ ‘ಪ್ರದೋಶ ಮಂಗಳಾರತಿ’ ಯಾಗುವಾಗ ಈತ ಹಾಜರಿರಬೇಕು. ಮಂಗಳಾರತಿ ಆದ ಮೇಲೆ ಹಲರ ಶೆಟ್ಟಿ ತಲೆಗೆ ‘ಮುಂಡಾಸು’(ರುಮಾಲು) ಸುತ್ತಿಕೊಂಡು ಕೊಡೆ, ಜೀವಟಿಗೆ ಡೋಲು, ತಾಳ, ಜಾಗಟೆಗಳೊಂದಿಗೆ ನಗರ ಪ್ರದಕ್ಷಿಣೆ ಬರಬೇಕು. ಇವನಿಗೆ ಜೊತೆಗಾರರಾಗಿ ಬಂಟ ಜನಾಂಗದವರಿರುತ್ತಾರೆ. ಹಿಂದೆ ಹೀಗೆ ನಗರ ಪ್ರದಕ್ಷಿಣೆ ಬರುವಾಗ ದೇವದಾಸಿಯರ ಅಥವಾ ಸೂಳೇರ ಮನೆಯಲ್ಲಿ ಅವಿತುಕೊಂಡಿರುವ ತಮ್ಮ ಜಾತಿಯ ಗಂಡಸರನ್ನು ಹುಡುಕಿ, ಹೊತ್ತುಕೊಂಡು ಬಂದು ಓಕುಳಿ ಹೊಂಡಕ್ಕೆ ಎಸೆಯುತ್ತಿದ್ದರು. ಹಿಂದೆ ಹಲರ ಸೆಟ್ಟಿ ನಗರ ಪ್ರದಕ್ಷಿಣೆ ಬರುವಾಗ ದೇವದಾಸಿಯರು ತಮ್ಮ ಮನೆಗಳ ಬಾಗಿಲು ತೆರೆದು ದೀಪಹಚ್ಚಿಡುತ್ತಿದ್ದರು. ತಮ್ಮ ಮನೆಗಳಲ್ಲಿ ಯಾರೂ ‘ವಿಟಪುರುಷ’ರು ಇಲ್ಲ ಎನ್ನುವುದರ ಸಂಕೇತವಾಗಿ ದೀಪ ಇಡುತ್ತಿದ್ದರು. ದೀಪ ಹಚ್ಚಿ ಇಡುವ ಈ ಪದ್ಧತಿ ಕೆಲವು ಮನೆಗಳಲ್ಲಿ ಈಗಲೂ ರೂಢಿಯಲ್ಲಿದೆ.

ಹಲರ ಸೆಟ್ಟಿಯ ನಗರ ಪ್ರದಕ್ಷಿಣೆಯಾದ ಬಳಿಕ ದೇವರಿಗೆ ಮಂಗಳಾರತಿಯಾಗಿ ಮೆರವಣಿಗೆಯಲ್ಲಿ ನಗರ ಪ್ರದಕ್ಷಿಣೆಯಾಗಬೇಕು. ಹಿಂದೆ ದೇವರ ಮೆರವಣಿಗೆಯ ಮುಂಚೂಣಿಯಲ್ಲಿ ದೇವದಾಸಿಯರ ನರ್ತನವು ಇರುತ್ತಿತ್ತು. ಬೇರೆ ಯಾವುದೇ ರೀತಿಯ ಮನೋರಂಜನೆಗಳಿಲ್ಲದ ಅಂದಿನ ಕಾಲದಲ್ಲಿ ಇದು ಗ್ರಾಮೀಣರ ಮನಸ್ಸನ್ನು ಸೂರೆಗೊಳ್ಳುತ್ತಿತ್ತು. ದೇವರ ನಗರ ಪ್ರದಕ್ಷಿಣೆಯಾಗಿ ದೇವಾಲಯಕ್ಕೆ ಬಂದ ಬಳಿಕ ಓಕುಳಿಯಾಟ ನಡೆಯುತ್ತದೆ. ಓಕುಳಿಯಾಟ ಮಹಾಲಿಂಗೇಶ್ವರ ದೇವಸ್ಥಾನದ ಎದುರಿನಲ್ಲಿರುವ ‘ಓಕುಳಿ ಹೊಂಡ’ ದಲ್ಲಿ ನಡೆಯುತ್ತದೆ. ಇಲ್ಲಿ ಅದಕ್ಕೆಂದೇ ನಿರ್ಮಿಸಿರುವ ಓಕುಳಿ ಹೊಂಡವಿದೆ. ಸುಮಾರು ಐದು ಅಡಿ ಆಳವಿದ್ದು ಎಂಟು ಅಡಿಗಳಷ್ಟು ಅಗಲವಿದೆ. ಓಕುಳಿಯ ದಿನ ಅದಕ್ಕೆ ನೀರು ತುಂಬಿಸಿ ಸ್ವಲ್ಪ ಪ್ರಮಾಣದ ‘ಓಕುಳಿ ನೀರನ್ನು’ ಸಾಂಕೇತಿಕವಾಗಿ ಸೇರಿಸುತ್ತಾರೆ. ಇಲ್ಲಿಯ ಓಕುಳಿ ಹೊಂಡಕ್ಕೆ ಹಾರುವವರು ಹಲರು ಅಥವಾ ಬಂಟ ಜಾತಿಯವರು ಮಾತ್ರ. ಮೊದಲು ಹಲರ ಸೆಟ್ಟಿ ಓಕುಳಿ ನೀರಿಗೆ ಹಾರಬೇಕು. ನಂತರ ಬಂಟ ಜನಾಂಗದವರು ಹಾರುತ್ತಾರೆ. ಓಕುಳಿ ಹೊಂಡದ ಮೇಲೆ ಚಪ್ಪರದಲ್ಲಿ ಜೋತಾಡಿಸುವ ಬಾಳೆಹಣ್ಣಿನ ಗೊನೆಗಾಗಿ ನಡೆಸುವ ಮೇಲಾಟ - ಸಾಹಸಗಳು ನೋಡುಗರಿಗೆ ರಂಜನೀಯವಾಗಿರುತ್ತದೆ.

ಓಕುಳಿಯಾಟ ಮುಗಿದ ನಂತರ ದೇವರ ‘ಅವಭೃತ ಸ್ನಾನ’ ಮೂಡುಕೇರಿಯ ಕೆರೆಯಲ್ಲಿ ನಡೆಯುತ್ತದೆ. ಕೆರೆಯ ದಡದಲ್ಲಿರುವ ತೊಪ್ಪಲು ಕಟ್ಟೆಯ ‘ಕಟ್ಟೆ ವಸಂತ’ದಲ್ಲೂ ಹಿಂದೆ ನೃತ್ಯ ಸೇವೆ ನಡೆಯುತ್ತಿತ್ತು. ಬಳಿಕ ಯಜ್ಞಕುಂಡದಲ್ಲಿ ಪೂರ್ಣಾಹುತಿಯಾಗಿ ಗರ್ನ (ಗರುಡ) ಇಳಿಸುತ್ತಾರೆ. ಸಾಮಾನ್ಯವಾಗಿ ಕರಾವಳಿಯ ಹೆಚ್ಚಿನ

ಎಲ್ಲ ದೇವಾಲಯಗಳಲ್ಲಿ ಗರುಡ ಇಳಿಸಿದ ದಿನವೇ ಜಾತ್ರೆ ಮುಕ್ತಾಯವಾಗುತ್ತದೆ. ಆದರೆ ಬಸ್ರೂರಿನಲ್ಲಿ ಮತ್ತೆ ಎರಡು ದಿನಗಳ ಉತ್ಸವ ನಡೆಯುತ್ತದೆ.

ಒಂಬತ್ತನೆಯ ದಿನ ರಾತ್ರಿ ಕೆರೆ ತೇರು. ಮಣೆಗಾರ್ರ ಮನೆಯಲ್ಲಿ ವಸಂತ. ರಾತ್ರಿ ಬಲಿಯಾಗಿ 'ನಗರೋತ್ಸವ' ನಗರೋತ್ಸವ ಮುಗಿಸಿ ದೇವರ ವಾಲಗ ಮಂಟಪಕ್ಕೆ ಬಂದ ಮೇಲೆ ಪೂಜೆಯಾಗಿ ಅಷ್ಟಾವಧಾನ ಸೇವೆ. ಇದರಲ್ಲಿ ನೃತ್ಯ ಸೇವೆಯೂ ನಡೆಯುತ್ತಿತ್ತು. ಹತ್ತನೆ ದಿನ ಬೆಳಿಗ್ಗೆ ನಗರೋತ್ಸವ ಆಗಿ ದೇವರು ವಾಲಗ ಮಂಟಪದಲ್ಲಿ ಕುಳಿತು ಅಷ್ಟಾವಧಾನ ಸೇವೆಗಳು ಮುಗಿದ ಮೇಲೆ 'ಕಡುಬನ ಕಾಳಗ' ನಡೆಯುತ್ತಿತ್ತು. ಹಿಂದೆ ದೇವದಾಸಿಯರು ಇದರಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು.

ನಗರ ಪ್ರದಕ್ಷಿಣೆಗೆ ಹೋದ ಶಿವನನ್ನು ಪಾರ್ವತಿ ಮುನಿಸಿನಿಂದ ಒಳಗೆ ಪ್ರವೇಶಿಸಲು ಬಿಡುವುದಿಲ್ಲ. ಆಗ ಪಾರ್ವತಿ ಮತ್ತು ಶಿವನ ಕಡೆಯವರಿಗೆ ಉಂಟಾದ ಕಾಳಗವನ್ನು ಇದು ಪ್ರತಿನಿಧಿಸುತ್ತದೆ. ಮೂಡುಸಾಲು ಮತ್ತು ಪಡುಸಾಲಿನ ದೇವದಾಸಿಯರು ಎರಡು ತಂಡಗಳಲ್ಲಿ ಎದುರುಬದುರಾಗಿ ನಿಲ್ಲುತ್ತಾರೆ. ದೇವಸ್ಥಾನದಲ್ಲಿ 'ಅಡಿಗೆ ಶಾಂತಿ'ಯವರು ಮಾಡಿದ ಗಟ್ಟಿ ಕಡುಬಿನ ತುಂಡುಗಳನ್ನು ಎರಡು ಹರಿವಾಣಗಳಲ್ಲಿ ಎರಡು ಗುಂಪಿನವರಿಗೆ ನೀಡುತ್ತಾರೆ. ಆ ಗಟ್ಟಿ ಕಡುಬಿನ ತುಂಡುಗಳನ್ನು ದೇವದಾಸಿಯರು ಒಬ್ಬರ ಮೇಲೊಬ್ಬರು ಎಸೆದು ಹೊಡೆದಾಡಿಕೊಳ್ಳುತ್ತಿದ್ದರು. ಈ ಮನೋರಂಜನೆಯನ್ನು ನೋಡುವುದಕ್ಕಾಗಿಯೇ ಹಳ್ಳಿ - ಹಳ್ಳಿಗಳಿಂದ ಮಕ್ಕಳು ಮುದುಕರೆನ್ನದೆ ಎಲ್ಲರೂ ಆಗಮಿಸುತ್ತಿದ್ದರೆಂದು ಈಗಿನ ಹಿರಿಯರು ಜ್ಞಾಪಿಸಿಕೊಳ್ಳುತ್ತಾರೆ. ಈಗ ಬಾಳೆಹಣ್ಣಿನಿಂದ ಮಕ್ಕಳ ಗುಂಪು ಹೊಡೆದಾಡಿಕೊಳ್ಳುವುದಕ್ಕೆ ಬದಲಾವಣೆಗೊಂಡಿದೆ. ಹಿಂದೆ ಈ ಎಲ್ಲ ಆಚರಣೆಗಳು ರಾಜವೈಭವದಿಂದ ನಡೆಯುತ್ತಿದ್ದವು. ಉತ್ಸವದ ಸಂದರ್ಭಗಳಲ್ಲಿ ದೇವದಾಸಿಯರು ಪ್ರಮುಖ ಪಾತ್ರ ವಹಿಸುತ್ತಿದ್ದು ಎಲ್ಲರ ಆಕರ್ಷಣೆಯ ಕೇಂದ್ರವೆನಿಸಿಕೊಳ್ಳುತ್ತಿದ್ದರು.

ದೇವಸ್ಥಾನದಲ್ಲಿ ಹಾಡುವ ಸಂದರ್ಭಗಳು ಇಲ್ಲಿಗೇ ಮುಗಿಯಲಿಲ್ಲ. ಪ್ರತಿ ತಿಂಗಳು 'ಸಂಕ್ರಾತಿ' ಮತ್ತು ಹಬ್ಬಹರಿದಿನಗಳಲ್ಲಿ ವಿಶೇಷ ದಿನಗಳಲ್ಲಿ ನಿಯಮ ನಿಷ್ಟರಾಗಿ ಭಕ್ತಿಯಿಂದ ಹಾಡಿ ನರ್ತಿಸುತ್ತಿದ್ದರು. ಕೆಲವು ದೇವಸ್ಥಾನಗಳಲ್ಲಿ ನವರಾತ್ರಿಯ ವಿಶೇಷ ದಿನಗಳಂದು ಹೋಗಿ ನೃತ್ಯಸೇವೆ ಮಾಡುತ್ತಿದ್ದರು. ಅದರಲ್ಲಿ ಮುಖ್ಯವಾಗಿ ದೇವಿ ದೇವಸ್ಥಾನ, ಕಾಮಾಕ್ಷಿ ದೇವಸ್ಥಾನ, ವೆಂಕಟರಮಣ ದೇವಸ್ಥಾನ, ದಾಮೋದರ ದೇವಸ್ಥಾನ, ಇತ್ಯಾದಿ. ದೇವಿ ದೇವಸ್ಥಾನದಲ್ಲಿ ವಿಶೇಷವಾಗಿ ವೀರಭದ್ರನಿಗೆ ನೃತ್ಯಸೇವೆ ನಡೆಯುತ್ತಿತ್ತು. ಅವರಿಗೆ ಈ ದೇವಸ್ಥಾನಗಳಲ್ಲಿ ನೃತ್ಯ ಸೇವೆಗಾಗಿ ಪ್ರಸಾದ ದೊರೆಯುತ್ತಿತ್ತು.

ಬಸ್ರೂರಿಗೆ ಸಮೀಪದ ಊರುಗಳಾದ ಹಟ್ಟಿ ಅಂಗಡಿ, ಸೌಕೂರು, ಮೊದಲಾದ ಊರುಗಳ ದೇವಸ್ಥಾನದ ಜಾತ್ರೆಗಳಿಗೆ ದೇವದಾಸಿಯರನ್ನು 'ವಿಳ್ಯ' ಕೊಟ್ಟು ಆಮಂತ್ರಿಸುತ್ತಿದ್ದರು. ಅಂದು ದೇವಸ್ಥಾನಗಳಲ್ಲಿ ದೇವದಾಸಿಯರ ಹಾಡು ಕುಣಿತ ಗೌರವದ ಮತ್ತು ಪ್ರತಿಷ್ಠೆಯ ವಿಷಯವಾಗಿತ್ತು.

## ೪.೩. ವಿಶೇಷ (ಇತರ) ಆಚರಣೆಗಳು

ನಂಬಿಕೆಯ ತಳಹದಿಯ ಮೇಲೆ ನಡೆಯುತ್ತಿರುವ ಜನಪದರ ಜೀವನ ಹಲವಾರು ಸಂಪ್ರದಾಯ ಆಚರಣೆಗಳಿಂದ ಬಂಧಿತವಾಗಿದೆ. ಧಾರ್ಮಿಕ ಹಿನ್ನಲೆಯಿಂದ ನಡೆಸಲ್ಪಡುವ ಜನಪದ ಆಚರಣೆಗಳು ಜೀವನದ ಅವಿಭಾಜ್ಯ ಅಂಗವಾಗಿರುವಷ್ಟರ ಮಟ್ಟಿಗೆ ಮಹತ್ವವನ್ನು ಪಡೆದುಕೊಂಡಿವೆ. ದೇವದಾಸಿಯರು ಕುಟುಂಬದಲ್ಲಿ ಹಿಂದಿನಿಂದಲೂ ತಮ್ಮ ಪೂರ್ವಿಕರು ನಡೆಸಿಕೊಂಡು ಬಂದಿರುವ ಕೆಲವು ಸಂಪ್ರದಾಯ, ಆಚರಣೆಗಳನ್ನು ಮುಂದುವರಸಿಕೊಂಡು ಬರುತ್ತಿದ್ದರು.



'ವ್ರತಾಚರಣೆಗಳು : ಗೆಜ್ಜೆ ಕಟ್ಟಿದ ದೇವದಾಸಿಯರು ದೇವಾಲಯದೊಂದಿಗೆ ಸಂಬಂಧ ಹೊಂದಿರುವುದರಿಂದ ನಿಯಮ ನಿಷ್ಠೆಯಿಂದ ಜೀವನ ಮಾಡುತ್ತಿದ್ದರು. ವಿಶೇಷ ದಿನಗಳಲ್ಲಿ ಉಪವಾಸವಿದ್ದು ವ್ರತಾಚರಣೆ ಮಾಡುತ್ತಿದ್ದರು. ಪ್ರತೀ ಏಕಾದಶಿಯಂದು ಉಪವಾಸವಿದ್ದು ಒಂದು ಹೊತ್ತು ಊಟ ಮಾಡುತ್ತಿದ್ದರು. ಶ್ರಾವಣ ಮಾಸದಲ್ಲಿ ಬರುವ ಎಲ್ಲ ಶನಿವಾರ, ಮತ್ತು ಕಾರ್ತಿಕ ಮಾಸದಲ್ಲಿ ಬರುವ ಎಲ್ಲ ಸೋಮವಾರಗಳಂದೂ ಉಪವಾಸವಿದ್ದು ವ್ರತ ಹಿಡಿಯುತ್ತಿದ್ದರು. ಪ್ರತೀ 'ಷಷ್ಠಿ'ಯಂದು ಉಪವಾಸ, 'ಶಿವರಾತ್ರಿ', 'ಕೃಷ್ಣಾಷ್ಟಮಿ'ಯಂದೂ ಕೂಡಾ ಉಪವಾಸ ಇರುತ್ತಿದ್ದರು. ವ್ರತಾಚರಣೆಯ ಈ ಎಲ್ಲ ಸಂದರ್ಭಗಳಲ್ಲಿಯೂ ದೇವಾಲಯದಲ್ಲಿ ಅಥವಾ ಬ್ರಾಹ್ಮಣರ ಮನೆಯಲ್ಲಿ 'ಬೀಳಿ ಅಕ್ಕಿಯ' (ಬೆಳ್ತಿಗೆ) ಅನ್ನ ಊಟಮಾಡುತ್ತಿದ್ದರು. ಮತ್ತು ಅವರಿಗೆ ಊಟದ ಪ್ರಯುಕ್ತ ಹಣ ಕೊಡುತ್ತಿದ್ದರು. ವ್ರತ ನೇಮಗಳ ದಿನ ಧರ್ಮಾರ್ಥ ಊಟ ಮಾಡಿದರೆ ವ್ರತದ 'ಪುಣ್ಯಫಲ' ದೊರೆಯುವುದಿಲ್ಲ. ಅದಕ್ಕಾಗಿ ಊಟದ ಹಣ ಕೊಡುತ್ತಿದ್ದರು. ಸಾಮಾನ್ಯಾವಾಗಿ ಕರಾವಳಿ ಪ್ರದೇಶವಲ್ಲೆಲ್ಲ ದೈನಂದಿನ ಊಟದಲ್ಲಿ 'ಕುಚ್ಚಿಗೆ ಅಕ್ಕಿ' ಯನ್ನೇ ಬಳಸುತ್ತಾರೆ. ಭತ್ತವನ್ನು ಬೇಯಸಿ ಒಣಗಿಸಿ ಅಕ್ಕಿ ಮಾಡುವುದರಿಂದ ಇದು 'ಮೈಲಿಗೆ' ಅನ್ನುವ ಅಭಿಪ್ರಾಯವೂ ಇದೆ. ಸಂಪ್ರದಾಯಸ್ಥ ಬ್ರಾಹ್ಮಣರು ಇಂದಿಗೂ ಈ ಅಕ್ಕಿಯ ಅನ್ನ ಊಟಮಾಡುವುದಿಲ್ಲ. ಅದಕ್ಕಾಗಿ ವ್ರತ, ನೇಮಗಳಂತ ವಿಶೇಷ ಸಂದರ್ಭಗಳಲ್ಲಿ ಬೆಳ್ತಿಗೆ ಅಕ್ಕಿಯ ಅನ್ನವನ್ನೇ ಬಳಸುತ್ತಾರೆ. ಬ್ರಹ್ಮಣೇತರರು ಸಾಮಾನ್ಯವಾಗಿ ವ್ರತಾಚರಣೆಯ ದಿನ ತಮ್ಮ ಮನೆಯಲ್ಲಿ ಊಟ ಮಾಡುವುದಿಲ್ಲ. ಯಾಕೆಂದರೆ ಅವರು ಇತರ ದಿನಗಳಲ್ಲಿ ಮೀನು, ಮಾಂಸ ಇತ್ಯಾದಿಗಳನ್ನು ಮಾಡುತ್ತಾರೆ. ಹೀಗೆ ಮನೆಯಲ್ಲಿ ಊಟ ಮಾಡುವುದರಿಂದ 'ವ್ರತಭಂಗ'ವಾಗುತ್ತದೆ ಎನ್ನುವ ನಂಬಿಕೆಯಿದೆ.





ದೇವದಾಸಿಯರ ಕೆಲವು ಮನೆತನಗಳವರು ಹಿಂದಿನಿಂದಲೂ ದೈವ,ದೇವರಂಗಳನ್ನು ಆರಾಧಿಸಿಕೊಂಡು ಬಂದಿದ್ದಾರೆ. ಇವರ ಕುಟುಂಬದಲ್ಲಿ ದೇವಿ ಅಥವಾ ದುರ್ಗೆಯನ್ನು ಪೂಜಿಸುತ್ತಾರೆ. ಮನೆ ದೈವವಾಗಿ 'ಪಂಜುರ್ಲಿ' ಪ್ರತ್ಯೇಕವಾದ ದೇವರ ಕೋಣೆಯಿದೆ. ದೇವರ ಕೋಣೆಯ ಮಡಿ ಮೈಲಿಗೆಯ ಬಗ್ಗೆ ಹೆಚ್ಚಿನ ಗಮನಕೊಡುತ್ತಾರೆ. ಸ್ನಾನ ಮಾಡದೆ ಯಾರು ದೇವರ ಕೋಣೆಯೊಳಗೆ ಪ್ರವೇಶಿಸುವುದಿಲ್ಲ. ನಿತ್ಯವೂ ಸ್ನಾನ ಮಾಡಿ ದೀಪಹಚ್ಚಿ ಹಾಲು ಇಟ್ಟು ಪೂಜೆ ಮಾಡುತ್ತಾರೆ. ನವರಾತ್ರಿಯ ಒಂಬತ್ತು ದಿನವೂ ದೇವಿಗೆ ವಿಶೇಷ ಪೂಜೆ ನಡೆಯುತ್ತದೆ. ಈ ದಿನಗಳಲ್ಲಿ ವೈದಿಕರಿಂದ ಪೂಜೆ ಮಾಡಿಸುತ್ತಾರೆ. ದಿನವೂ ಮಧ್ಯಾಹ್ನ ಒಂದು ಪಾವ್ ಅಕ್ಕಿಯ ಹಾಲು ಪರಮಾನ್ನ. ರಾತ್ರಿ ಹಾಲು, ನೈವೇಧ್ಯ ಮಾಡಿ ಪೂಜೆ ಮಾಡುತ್ತಾರೆ. ವಿಜಯದಶಮಿಯ ದಿನ ರಾತ್ರಿಯು ಹಾಲು ಪರಮಾನ್ನ, ಜೊತೆಗೆ ವಬ್ಬಟ್ಟು, ಹೋಳಿಗೆ, ಲಾಡು ಮೊದಲಾದ ಭಕ್ಷ್ಯಗಳನ್ನು ದೇವರಿಗೆ ಅರ್ಪಣೆ ಮಾಡಿ ಮಂಗಲಾಚರಣೆ ಮಾಡುತ್ತಾರೆ.

ಮನೆಯ ದೈವ 'ಪಂಜುರ್ಲಿ' ಯನ್ನು ದೇವರ ಕೋಣೆಯಲ್ಲಿಯೇ ಪ್ರತಿಷ್ಠಾಪಿಸಿದ್ದಾರೆ. ದೈವದ ಭಂಡಾರ (ಕಡ್ಸಲೆ) ವನ್ನು ಪೂಜಿಸುತ್ತಾರೆ. ಭೂತಕ್ಕೆ ವರ್ಷಕ್ಕೊಮ್ಮೆ ಪನಿವಾರ ನೈವೇಧ್ಯ ಮಾಡಿ ಪೂಜೆ ಮಾಡುತ್ತಾರೆ. ಕುಂದಾಪುರ ತಾಲೂಕಿನ ಈ ಭಾಗಗಳಲ್ಲಿ ಭೂತಕ್ಕೆ ಕೋಲ ಮಾಡುವ ಪದ್ಧತಿ ಇಲ್ಲ. ಮನೆಯಲ್ಲಿ ನಡೆಯುವ ಈ ಎಲ್ಲ ಧಾರ್ಮಿಕ ಕ್ರಿಯಾದಿಗಳಿಗೆ ಮನೆತನಕ್ಕೆ ಸಂಬಂಧಿಸಿದವರೆಲ್ಲ ತಮ್ಮ ಅನುಕೂಲಕ್ಕೆ ತಕ್ಕಂತೆ ಕಾಣಿಕೆ ನೀಡುತ್ತಾರೆ.

ಹೊಸ್ತು (ಕದಿರು ಹಬ್ಬ) : ಬೇಸಾಯಕ್ಕೆ ಸಂಬಂಧಿಸಿದ ಆಚರಣೆಗಳಲ್ಲಿ ಕದಿರು ಹಬ್ಬವು ಅತೀ ಮುಖ್ಯವಾದುದು. ಕರಾವಳಿ ಪ್ರದೇಶದ ಪ್ರತಿಯೊಂದು ಹಿಂದೂ ಕುಟುಂಬದವರೂ ಈ ಸಂಪ್ರದಾಯವನ್ನು ಆಚರಿಸುತ್ತಾರೆ. ರೈತ ತನ್ನ ಶ್ರಮದ ಫಲವಾದ ಭತ್ತದ ಕದಿರನ್ನು ಮನೆಗೆ ತಂದು ಪೂಜಿಸುವ ಹಬ್ಬವನ್ನು 'ಕದಿರು ಹಬ್ಬ' ಎಂದು ಆಚರಿಸಲಾಗುವುದು. ಇದನ್ನು 'ಕದಿರು ಕಟ್ಟುವುದು' ಅಥವಾ 'ಹೊಸ್ತು' ಎನ್ನುವ ಹೆಸರಿನಿಂದಲೂ ಕರೆಯುತ್ತಾರೆ. ಬಸ್ರೂರು ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಗ್ರಾಮ ದೇವರಾದ 'ಶ್ರೀ ಮಹಾಲಿಂಗೇಶ್ವರ' ದೇವರ ತಾರಾನುಕೂಲವಾದ ದಿನದಂದು ಈ ಹಬ್ಬದ ಆಚರಣೆಯನ್ನು ಮಾಡಲಾಗುವುದು. ನಿಶ್ಚಿತ ದಿನದಂದು ದೇವಾಲಯದಲ್ಲಿ ಪೂಜಿಸಿ ಕೊಟ್ಟ (ಭತ್ತದ ತೆನೆ) 'ಕದಿರನ್ನು' ಗಂಡಸರು ಮನೆಗೆ ತರುತ್ತಾರೆ. ಹಾಗೆ ತಂದ ಕದಿರನ್ನು ಮನೆಯಲ್ಲಿ ದೇವರ ಕೋಣೆಯಲ್ಲಿಟ್ಟು ಪುನ: ಪೂಜೆ ಮಾಡುತ್ತಾರೆ. ನಂತರ ಕದಿರನ್ನು ಮನೆಯಲ್ಲಿರುವ ಪ್ರತಿಯೊಂದು ವಸ್ತುಗಳಿಗೂ, ಪ್ರತಿಯೊಂದು ಭಾಗಕ್ಕೂ ಕಟ್ಟುತ್ತಾರೆ. ಆ ದಿನ ಮನೆಯಲ್ಲಿ ವಿಶೇಷವಾದ ಅಡುಗೆಯನ್ನು ತಯಾರಿಸುತ್ತಾರೆ. ಹಳೆಯ ಅಕ್ಕಿಯ ಜೊತೆಗೆ ಒಂಭತ್ತು ಹೊಸ ಭತ್ತವನ್ನು ಸುಲಿದು ಅಕ್ಕಿಯ ಜೊತೆಗೆ ತೆಂಗಿನ ಕಾಯಿ ಹಾಲು ಮತ್ತು ಸಕ್ಕರೆ ಬೆರಸಿ ಸಿಹಿ ಅನ್ನ ಮಾಡುತ್ತಾರೆ. ಇದನ್ನು 'ಹೊಸತು ಊಟ' ಎಂದು ಹೇಳುತ್ತಾರೆ. ಹರಿವೆ ಮತ್ತು ಕೆಸವಿನ ದಡಿಯ ಪದಾರ್ಥವು ಆ ದಿನದ ವಿಶೇಷವಾಗಿರುತ್ತದೆ. ಇದೊಂದು ಸಾಮೂಹಿಕವಾದ ಆಚರಣೆ. ದೇವದಾಸಿಯರಲ್ಲದೆ ಎಲ್ಲ ಮನೆಯವರೂ ಕೂಡಾ ಆಚರಿಸುತ್ತಾರೆ.

ಮೇಲೆ ತಿಳಿಸಿರುವ ಎಲ್ಲ ಆಚರಣೆಗಳನ್ನು 'ದೇವದಾಸಿ'ಯರ ಕುಟುಂಬಿಕರು ಈಗಲೂ ಆಚರಿಸಿಕೊಂಡು ಬರುತ್ತಿದ್ದಾರೆ. ಜೊತೆಗೆ ಯುಗಾದಿ, ಗಣೇಶ ಚತುರ್ಥಿ, ದೀಪಾವಳಿ, ಹಬ್ಬಗಳನ್ನು ಕೂಡಾ ಅವರವರ ಅನುಕೂಲತೆಗಳಿಗೆ ತಕ್ಕಂತೆ ಆಚರಿಸಿಕೊಂಡು ಬರುತ್ತಾರೆ.

ಹಿಂದೆ 'ರಾಮನವಮಿ' ಮತ್ತು 'ನವರಾತ್ರಿಗಳನ್ನು' ದೇವದಾಸಿಯರು ವಿಶೇಷವಾಗಿ ಆಚರಿಸುತ್ತಿದ್ದರು. ಕ್ರಮವಾಗಿ ಎರಡೂ ಹಬ್ಬಗಳಲ್ಲೂ ಮನೆಯ ಅಂಗಳದಲ್ಲಿ 'ಸರಸ್ವತಿ' ಮತ್ತು 'ರಾಮನಿಗೆ' ಮಂಟಪ ಕಟ್ಟಿ ಪೂಜಿಸುತ್ತಿದ್ದರು. ನವರಾತ್ರಿಯನ್ನು ಒಂಭತ್ತು ದಿನ ಆಚರಿಸಿದರೆ ರಾಮನವಮಿಯನ್ನು ಐದು ದಿನ ಆಚರಿಸುತ್ತಿದ್ದರು. ಹಬ್ಬದ ಕೊನೆಯ ದಿನ ರಾತ್ರಿ ವೈದಿಕರಿಂದ ಮಂಗಲಾಚರಣೆಯಾಗಿ ಬಂದಿರುವ ಬಂಧು ಬಾಂಧವರಿಗೆಲ್ಲ ಪ್ರಸಾದ ವಿತರಣೆ ಮತ್ತು ಊಟೋಪಚಾರ ನಡೆಯುತ್ತಿತ್ತು.

ಈ ಎರಡೂ ಸಂದರ್ಭಗಳಲ್ಲಿಯೂ ಮನೆಯಲ್ಲಿ ಸಂಗೀತ ಕಛೇರಿ ನಡೆಸುತ್ತಿದ್ದರು. ಅಲ್ಲದೆ ಹೊರಗಿನಿಂದ ವಾದ್ಯಗಾರರನ್ನು, ಗಾಯಕರನ್ನು ಕರೆಸಿ ಅವರಿಗೆ ಫಲ ಕಾಣಿಕೆ ನೀಡಿ ಸತ್ಕರಿಸುತ್ತಿದ್ದರು. ಸಂಗೀತ ಅಭಿಮಾನಿಗಳು, ಬಂಧುಬಳಗದವರೆಲ್ಲ ಈ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಸಾಮಾನ್ಯವಾಗಿ ಹಬ್ಬದ ಕೊನೆಯವರೆಗೂ ಮನೆಯಲ್ಲಿ ಸಂಗೀತ ಕಛೇರಿ ನಡೆಸುತ್ತಿದ್ದರು. ಈಗ ಇಂತಹ ಯಾವುದೇ ಪದ್ಧತಿಯನ್ನು ಆಚರಿಸುವುದಿಲ್ಲ. ದೇವದಾಸಿಯರು ತಮ್ಮ 'ಕುಲವೃತ್ತಿ' ಯನ್ನು ನಿಲ್ಲಿಸಿದಾಗಲೇ ಈ ಪದ್ಧತಿಗಳನ್ನೆಲ್ಲ ಕೈ ಬಿಟ್ಟಿದ್ದಾರೆ.

ದೇವದಾಸಿಯರು ಹರಕೆಯ ರೂಪದಲ್ಲಿ ಇತರ ದೇವಸ್ಥಾನಗಳಲ್ಲಿ ನರ್ತನ ಸೇವೆ ನಡೆಸುವ ಸಂಪ್ರದಾಯವಿಟ್ಟುಕೊಂಡಿದ್ದರು. ಕೊಲ್ಲೂರು, ಕಾಳಾವರದ ಸುಬ್ರಹ್ಮಣ್ಯ ಮೊದಲಾದ ದೇವರಿಗೆ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಮಕ್ಕಳಾಗದಿದ್ದಲ್ಲಿ ಅಥವಾ ಖಾಯಿಲೆಗೆ ತುತ್ತಾದ ಸಂದರ್ಭಗಳಲ್ಲಿ ಈ ದೇವರುಗಳಿಗೆ ಹರಕೆ ಹೇಳಿಕೊಳ್ಳುತ್ತಿದ್ದರು.

ಎಲ್ಲ ಜನಪದರಂತೆ ದೇವದಾಸಿಯರು ಕೂಡಾ ಮಾಟ ಮಂತ್ರಗಳನ್ನು ನಂಬುತ್ತಿದ್ದರು. ಅದರಲ್ಲಿ ವಿಶೇಷವಾದ ನಂಬಿಕೆಯನ್ನು ಇಟ್ಟುಕೊಂಡಿದ್ದರು. ಮನೆಯ ವ್ಯಕ್ತಿಗಳಿಗೆ ದೈಹಿಕ ಅಥವಾ ಮಾನಸಿಕ ಅಸಮತೋಲನಗಳುಂಟಾದಾಗ ತಮಗಾಗದವರು ಮಾಟ, ಮಂತ್ರ ಮಾಡಿರಬಹುದು ಎಂದು ತಿಳಿದುಕೊಳ್ಳುತ್ತಿದ್ದರು. ಶ್ರೀಮಂತನೋರ್ವನನ್ನು ವೇಶ್ಯೆಯೊಬ್ಬಳು ತನ್ನ ಕಡೆಗೆ ಸೆಳೆದುಕೊಂಡಿದ್ದರೆ, 'ಮೋಡಿ ಮಾಡಿ ವಶ ಮಾಡಿಕೊಂಡಿದ್ದಾಳೆ' ಎಂದು ಭಾವಿಸುತ್ತಿದ್ದರು. ಈ ಸಂದರ್ಭಗಳಲೆಲ್ಲ ಊರಿನ ಜೋಯಿಸರ ಮೊರೆ ಹೋಗುತ್ತಿದ್ದರು.

ಇವರ ಆಹಾರ ಪದ್ಧತಿಯು ಸಮ್ಮಿಶ್ರವಾಗಿದೆ. ಹಬ್ಬ ಹರಿದಿನ ವ್ರತ ನೇಮಗಳಲ್ಲಿ ಶುದ್ಧ ಸಸ್ಯಹಾರವಾದರೆ, ಉಳಿದ ದಿನಗಳಲ್ಲಿ ಮಾಂಸಹಾರವಿರುತ್ತಿತ್ತು.

## ಟಿಪ್ಪಣಿಗಳು

೧. ಹಸ್ತಮುದ್ರೆ

೨. ವ್ಯಕ್ತಿಯು ಮೃತಪಟ್ಟಲ್ಲಿ ಆ ವ್ಯಕ್ತಿಯ ಪ್ರೇತಾತ್ಮ ಸುತ್ತುತ್ತಿರುತ್ತದೆ ಎನ್ನುವ ನಂಬಿಕೆಯು ಜನಪದರಲ್ಲಿದೆ.

೩. ಶೋಕಗೀತೆಯು ಸಾವಿನ ಸಂಕೇತವನ್ನು ಸಾರುತ್ತದೆ. ಮತ್ತು ಶೋಕವನ್ನು ಉದ್ದೀಪನಗೊಳಿಸುತ್ತದೆ.

೪. ಮಲೆನಾಡಿನಲ್ಲಿ ಇದನ್ನು ಈಡು ಎಂದು ಕರೆಯುತ್ತಾರೆ.

೫. ಮೃತ ವ್ಯಕ್ತಿಯ ಅಪರ ಕ್ರಿಯೆಯ ಹೊಣೆಯನ್ನು ವಹಿಸಿಕೊಳ್ಳುವ ಧಾರ್ಮಿಕ ಕ್ರಿಯೆ.

೬. ಕುಂದಾಪುರ ಪ್ರಾದೇಶಿಕ ಭಾಷೆಯಲ್ಲಿ ಭೂತ ಮತ್ತು ಪ್ರೇತಗಳಿಗೆ 'ಜಕಣಿ' ಎನ್ನುತ್ತಾರೆ.

೭. ಇದು ಸೇವೆಯ ರೂಪದಲ್ಲಿ ದೇವರಿಗೆ ಮಾಡುವ ವಿಶೇಷ ಪೂಜೆ, ಭಕ್ತಾದಿಗಳ ಮನಸ್ಸನ್ನು ತಂಪಾಗಿಡುವುದೇ ಈ ಪೂಜೆಯ ಔಚಿತ್ಯ ಅದಕ್ಕಾಗಿ ದೇವರಿಗೆ ಹಣ್ಣು ಮತ್ತು ಪಾನಕಗಳ ನೈವೇಧ್ಯ ಮಾಡಿ ನೆರೆದವರಿಗೆಲ್ಲ ಹಂಚುತ್ತಾರೆ.

೮. ಹಲ ಅಂದರೆ ನೇಗಿಲು, ಎಂದರ್ಥ.

೯. ಐದು ಎಲೆ, ಒಂದು ಅಡಿಕೆ, ಒಂದು ವರಹ ಇಟ್ಟು ಕಾರ್ಯಕ್ರಮಕ್ಕೆ ಆಮಂತ್ರಣ ನೀಡಬೇಕು. ಇದು ಗೌರವದ ಸಂಕೇತ.



ಅಧ್ಯಾಯ : ೫

# ದೇವದಾಸಿಯರ ಕೌಟುಂಬಿಕ ಬದುಕು

೫.೧ ಒಳಪಂಗಡಗಳು

೫.೨ ದೇವದಾಸಿ ಮತ್ತು ಕುಟುಂಬ ರಚನೆಯ ವಿಕಾಸ

೫.೩ ವಾಸ್ತು ವೈಶಿಷ್ಟ್ಯಗಳು

ಅಧ್ಯಾಯ : ೫

# ದೇವದಾಸಿಯರ ಕೌಟುಂಬಿಕ ಬದುಕು

ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬವೆನ್ನುವುದು ಅತ್ಯಂತ ಪ್ರಮುಖವಾದ ಘಟಕ. ಒಂದು ಜನಾಂಗದ ಕುಟುಂಬ ಸಂಸ್ಕೃತಿಯು ಸಾಮಾಜಿಕ ವ್ಯವಸ್ಥೆಯನ್ನು ರೂಪಿಸುತ್ತದೆ. ಕುಟುಂಬ ವ್ಯವಸ್ಥೆಯಲ್ಲಿ ಕುಟುಂಬದ ವ್ಯಕ್ತಿ - ವ್ಯಕ್ತಿಗಳ ನಡುವಿನ ಸಂಬಂಧ, ಅವರ ಜೀವನ ರೀತಿ, ವಾಸಿಸುವ ಮನೆ, ಉಡುಗೆ ತೊಡುಗೆಗಳು, ಮೊದಲಾದವುಗಳನ್ನು ನಿರೂಪಿಸಬೇಕಾಗುತ್ತದೆ. ಪ್ರಸ್ತುತ ಅಧ್ಯಾಯದಲ್ಲಿ ದೇವದಾಸಿಯರ ಕೌಟುಂಬಿಕ ರಚನೆ, ಅವರ ಜೀವನದ ರೀತಿ ನೀತಿ ಮೊದಲಾದುವುಗಳನ್ನು ವಿವರಿಸಲಾಗಿದೆ.

## ೫.೧. ಒಳಪಂಗಡಗಳು

ಹಿಂದೆ ಬಸ್ರೂರೂರಿನ ದೇವದಾಸಿಯರ ಸಮಾಜದಲ್ಲಿ ಎರಡು ಪ್ರಮುಖ ವರ್ಗಗಳಿದ್ದುದು ಕಂಡುಬರುತ್ತದೆ. ದೇವಾಲಯದಲ್ಲಿ 'ಗೆಜ್ಜೆ ಕಟ್ಟಿ' ದೀಕ್ಷೆ ಪಡೆದುಕೊಂಡವರು ಒಂದು ವರ್ಗವಾದರೆ, ದೀಕ್ಷೆ ಪಡೆಯದೆ 'ಮೇಳ' ಗಳಿಗೆ ಹೋಗುತ್ತಿದ್ದವರು ಇನ್ನೊಂದು ವರ್ಗ.

ಇಲ್ಲಿ ದೇವಾಲಯಕ್ಕೆ ಗೆಜ್ಜೆ ಕಟ್ಟುವ ಅಧಿಕಾರ ಎಲ್ಲ ಮನೆಯವರಿಗೂ ಇರಲಿಲ್ಲ. ಪ್ರತ್ಯೇಕವಾದ ಐದು ಮನೆತನದವರಿಗೆ ಮಾತ್ರ ಈ ಅಧಿಕಾರ ಇರುತ್ತಿತ್ತು. ಈ ಹಕ್ಕು ವಂಶಪಾರಂಪರ್ಯವಾಗಿ ಬರುತ್ತಿತ್ತು. ತಾಯಿಯಿಂದ ಮೊದಲ ಮಗಳಿಗೆ ಮಾತ್ರ ಅಧಿಕಾರ ದೊರೆಯುತ್ತಿತ್ತೆಂದು ತಿಳಿದುಬರುತ್ತದೆ. ದೇವಾಲಯದಲ್ಲಿ ನೃತ್ಯ ಮಾಡುವವರಿಗೆ ಉನ್ನತವಾದ ಸಾಮಾಜಿಕ ಮನ್ನಣೆ ಇರುತ್ತಿತ್ತು. ಅವರು ನಿರ್ದಿಷ್ಟ ವ್ಯಕ್ತಿಗಳೊಂದಿಗಷ್ಟೇ ಜೀವನ ಮಾಡುತ್ತಿದ್ದರು. ಅವರನ್ನು ಕೆಣಕಲು ಯಾರೂ ಹೋಗುತ್ತಿರಲಿಲ್ಲ. ಅವರು ಹೊರಗೆ ಎಲ್ಲೂ ಮೇಳಗಳಿಗೂ ಹೋಗುತ್ತಿರಲಿಲ್ಲ.

ಈ ಸಮಾಜದಲ್ಲಿ ಗೆಜ್ಜೆ ಕಟ್ಟದೆ ಇರುವ ಹೆಂಗಸರು 'ಮೇಳ'ಗಳಿಗೆ ಹೋಗುತ್ತಿದ್ದರು. ಜೊತೆಗೆ ಪರಂಪರೆಯಿಂದ ಬಂದಿರುವ ಕುಲಕಸುಬಾದ 'ವೇಶ್ಯಾವೃತ್ತಿ'ಯನ್ನು ಮಾಡುತ್ತಿದ್ದರು. ಸಾಮಾನ್ಯವಾಗಿ ಗಂಡು ಮಕ್ಕಳಿಗೆ ಹುಟ್ಟಿದ ಹೆಣ್ಣು ಮಕ್ಕಳು ಈ ಪದ್ಧತಿಯನ್ನು ಅನುಸರಿಸುತ್ತಿದ್ದರೆಂದು ತಿಳಿದು ಬರುತ್ತದೆ. ಇವರಿಗೆ

ಯಾವುದೇ ರೀತಿಯ ಸಾಮಾಜಿಕ ಮನ್ನಣೆ ಇರುತ್ತಿರಲಿಲ್ಲ. ಇವರು ತಮ್ಮನ್ನು ಬಯಸಿದವರೊಂದಿಗೆ ಕೂಡಬಹುದಾಗಿತ್ತು. ಈ ಪದ್ಧತಿ ಹಿಂದಿನಿಂದಲೂ ಈ ಮನೆತನಗಳಲ್ಲಿ ಇದ್ದುದರಿಂದ ಅಂದು ಯಾರು ಅದರ ಬಗ್ಗೆ ಸಂಕೋಚ ಪಟ್ಟು ಕೊಳ್ಳುತ್ತಿರಲಿಲ್ಲ. ನಂತರದ ದಿನಗಳಲ್ಲಿ ಗೆಜ್ಜೆ ಕಟ್ಟಿದವರೂ ಮೇಳಗಳಿಗೆ ಹೋಗುತ್ತಿದ್ದರು.

ಅಂದು 'ಮಾಲೆಯವರು' ಎನ್ನುವ ಇನ್ನೊಂದು ವರ್ಗವು ದೇವಾಲಯದ ಸೇವೆಯಲ್ಲಿದ್ದರು. ಇವರು ಪೂರ್ವದಲ್ಲಿ ಬ್ರಾಹ್ಮಣ ವಿಧವಾ ಸ್ತ್ರೀಯಿಂದ ಅಥವಾ ಬ್ರಾಹ್ಮಣ ಸ್ತ್ರೀಯಲ್ಲಿ ಅನ್ಯ ಜಾತಿಯವರಿಂದ ಹುಟ್ಟಿದ ಸಂತಾನವೆಂದು ಪ್ರತೀತಿಯಿದೆ. ಹಿಂದೆ ಬ್ರಾಹ್ಮಣರಲ್ಲಿ ಈ ರೀತಿಯ ಅನೈತಿಕ ಕಾರ್ಯ ಮಾಡಿದವರನ್ನು ಜಾತಿಯಿಂದ ಹೊರಹಾಕುವ ಪದ್ಧತಿಯಿತ್ತು. ಜಾತಿಯಿಂದ ಹೊರಹಾಕುವ ಆ ಸಂಸ್ಕಾರಕ್ಕೆ 'ಘಟಶ್ರದ್ಧಾ'ಎನ್ನುತ್ತಾರೆ. ಅಂದರೆ ವ್ಯಕ್ತಿಯು ಜೀವಿತದಲ್ಲಿರುವಾಗಲೇ ಉತ್ತರ ಕ್ರಿಯಾದಿಗಳನ್ನು ಮಾಡಿ ಮುಗುಸಿ ಅವನ ಸಂಬಂಧವನ್ನು ಕಡಿದುಕೊಳ್ಳುತ್ತಿದ್ದರು. ಇದು ಗಂಡಸರಿಗೂ, ಹೆಂಗಸರಿಗೂ ಇಬ್ಬರಿಗೂ ಅನ್ವಯವಾಗುತ್ತದೆ. ಈ ರೀತಿ ಜಾತಿಯಿಂದ ಹೊರಹಾಕಲ್ಪಟ್ಟ ಹೆಂಗಸರು ದೇವಾಲಯಗಳನ್ನು ಆಶ್ರಯಿಸಿ ಕೊಂಡು ಇರುತ್ತಿದ್ದರೆಂದು ಪ್ರತೀತಿ ಇದೆ.

ಮಾಲೆಯವರ ಹೆಂಗಸರು ಕೂಡಾ ದೇವಾಲಯಗಳಲ್ಲಿ ವಂಶ ಪಾರಂಪರ್ಯವಾಗಿ ಸೇವೆ ಮಾಡುತ್ತಿದ್ದರು. ಇವರಿಗೂ ಮದುವೆ ನಿಷಿದ್ಧವಾಗಿದ್ದು ಶಿವನನ್ನೇ ಪತಿಯೆಂದು ಸ್ವೀಕರಿಸುವವರು. ಹಿಂದೆ ಇವರಿಗೆ ದೇವಾಲಯದಲ್ಲಿ ದೀಕ್ಷೆ ಕೊಡುವ ಪದ್ಧತಿ ಇತ್ತೆಂದು ತಿಳಿದು ಬರುತ್ತದೆ. ದೇವದಾಸಿಯರು ನೃತ್ಯ ಸೇವೆ ಮಾಡಿದರೆ, ಇವರು ದೇವರಿಗೆ 'ಕುಂಚ' ಬೀಸುವ ಕೆಲಸ ಮಾಡುತ್ತಿದ್ದರು. ಈಗ ಇವರ ಪ್ರತ್ಯೇಕವಾದ ವರ್ಗವೇ ಬೆಳೆದು ಬಂದಿದೆ.

ಮೇಲೆ ತಿಳಿಸಿರುವ ಯಾವ ವರ್ಗವೂ ಈಗ ತನ್ನ ಕುಲಕಸುಬನ್ನು ಅವಲಂಬಿಸಿಕೊಂಡಿಲ್ಲ. ಇವರೆಲ್ಲ ತಮ್ಮ ಕುಲವೃತ್ತಿಯನ್ನು ತ್ಯಜಿಸಿ ಸಮಾಜದಲ್ಲಿ ಇತತರಂತೆ ಗುರುತಿಸಲ್ಪಡುತ್ತಾರೆ.

### ೫.೨. ದೇವದಾಸಿ ಮತ್ತು ಕುಟುಂಬ ರಚನೆಯ ವಿಕಾಸ

ದೇವದಾಸಿಯರ ಕೌಟುಂಬಿಕ ಜೀವನದಲ್ಲಿ ಅವರದ್ದೇ ಆದ ವಿಶೇಷತೆಯಿತ್ತು. ಕುಟುಂಬವು 'ಮಾತೃ ಮೂಲೀಯ'ವಾಗಿದ್ದು ಸ್ತ್ರೀಗೆ ಪ್ರಾಧಾನ್ಯತೆ ಹೆಚ್ಚು. ಮನೆತನದ ಆಸ್ತಿ ಸಂಪತ್ತುಗಳಿಗೆ ಸ್ತ್ರೀಯೇ ಹಕ್ಕಿನವಳು. ಮನೆಯಲ್ಲಿ ತಾಯಿ ಅಥವಾ ಹಿರಿಯ ದೇವದಾಸಿಯಾದವಳು ಯಜಮಾನಿಯಾಗಿರುತ್ತಿದ್ದಳು. ಕುಟುಂಬದಲ್ಲಿ ಅಧಿಕಾರವು ವಂಶಪಾರಂಪರ್ಯವಾಗಿ ತಾಯಿಯಿಂದ ಮಗಳಿಗೆ ಬರುತ್ತಿತ್ತು. ಇವರಲ್ಲಿ 'ಮಾತೃಮೂಲೀಯ' ಪದ್ಧತಿ ಪ್ರಚಲಿತದಲ್ಲಿದ್ದುದರಿಂದ ಮನೆಯ ಧಾರ್ಮಿಕ ಕ್ರಿಯಾದಿಗಳನ್ನು ನಡೆಸುವ ಅಧಿಕಾರ ಹೆಣ್ಣಿಗೇ ಇರುತ್ತಿತ್ತು. ಆದ್ದರಿಂದ ಕುಟುಂಬದಲ್ಲಿ ಹೆಣ್ಣು ಸಂತಾನವನ್ನು ಹೆಚ್ಚು ಇಷ್ಟಪಡುತ್ತಿದ್ದರು.

ದೇವದಾಸಿಯರ ಕುಟುಂಬದಲ್ಲಿ ಗಂಡಸರಿಗೆ ಪ್ರಾಧಾನ್ಯತೆ ಇರುತ್ತಿರಲಿಲ್ಲ. ಗಂಡುಮಕ್ಕಳಿದ್ದರೆ ಅವರಿಗೆ ಅಶನಾರ್ಥ ನೀಡುತ್ತಿದ್ದರು. ಅಥವಾ ಅವರು ಹೆಣ್ಣುಮಕ್ಕಳನ್ನು ಅವಲಂಬಿಸಿಕೊಂಡಿರುತ್ತಿದ್ದರು. ಮನೆಯ ವ್ಯವಹಾರವನ್ನು ಹೆಂಗಸರ ಆಡಳಿತದಲ್ಲಿ ಸೋದರಮಾವ ಅಥವಾ ಅಣ್ಣ, ತಮ್ಮಂದಿರು ನೋಡಿಕೊಳ್ಳುತ್ತಿದ್ದರು. ವೇಶ್ಯಾವೃತ್ತಿ ಪ್ರಚಲಿತದಲ್ಲಿದ್ದ ಕಾಲದಲ್ಲಿ ಮನೆಯ ಹೆಂಗಸರಿಗೆ ಸಹಾಯಕರಾಗಿರುತ್ತಿದ್ದರು. ಯಾಕೆಂದರೆ ಹೆಂಗಸರಿಗೆ ವಿಟಪುರುಷರನ್ನು ಪೂರೈಕೆ ಮಾಡಲು ಪರಿಚಾರಕರು ಬೇಕಾಗಿತ್ತು. ಆ ಪರಿಚಾರಕರ ಕೆಲಸವನ್ನು ಇವರು ನಿರ್ವಹಿಸುತ್ತಿದ್ದರು. ಈ ರೀತಿಯ ವೃತ್ತಿಯು ಇಂದಿನ ಕಾಲಕ್ಕೆ ಅಸಮಂಜಸವೆಂದು ಕಂಡರೂ ಅಂದಿನ ಕಾಲದಲ್ಲಿ ಅದು ಸಮಂಜಸವಾಗಿತ್ತೆಂದು ತೋರುತ್ತದೆ.

ಇವರು ಉತ್ತಮ ಕಲಾವಿದರು ಕೂಡಾ ಆಗಿದ್ದು ನೃತ್ಯ ಸಂಗೀತಗಳಿಗೆ ಹಿಮ್ಮೇಳ ಒದಗಿಸುತ್ತಿದ್ದರು. ಕೆಲವರಿಗೆ ಧನಿಕರು ಉಂಬಳಿ ಬಿಟ್ಟಿರುವ ಜಮೀನುಗಳಿದ್ದು ಅದರ ಉಸ್ತುವಾರಿ ನೋಡಿಕೊಳ್ಳುತ್ತಿದ್ದರು. ನಂತರದ ದಿನಗಳಲ್ಲಿ ಕೆಲವರು ಹೊಲಿಗೆ ಮೊದಲಾದ ವೃತ್ತಿಗಳಲ್ಲಿ ತರಬೇತಿ ಪಡೆದು ಅವರವರ ಸಂಪಾದನೆ ಮಾಡಿಕೊಳ್ಳುತ್ತಿದ್ದರು. ಒಟ್ಟಿನಲ್ಲಿ ಗಂಡಸರಿಗೆ ಸಾಮಾಜಿಕ ಭದ್ರತೆ ಇರುತ್ತಿರಲಿಲ್ಲ. ಒಂದೆ ದೇವದಾಸಿ ಸಮಾಜದವರು ಮದುವೆಯಾಗಬಾರದೆನ್ನುವ ನಂಬಿಕೆಯಿತ್ತು. ಗಂಡಿಗಾಗಲೀ ಹೆಣ್ಣಿಗಾಗಲೀ ಮದುವೆ ಈ ಸಮಾಜಕ್ಕೆ ನಿಷಿದ್ಧವಾಗಿತ್ತು. ಹೆಣ್ಣಿಗೆ ಮದುವೆಯ ಬದಲಿಗೆ ಗೆಜ್ಜೆಪೂಜೆ ನಡೆಯುತ್ತಿತ್ತು. ಗಂಡುಗಳು ತಮ್ಮ ಸಮಾಜದ ಇತರ ಹೆಣ್ಣುಗಳನ್ನು ಇಟ್ಟುಕೊಳ್ಳುತ್ತಿದ್ದರು. ಇವರಲ್ಲಿ 'ಕುಲಕಸುಬಾ'ದ 'ವೇಶಾವೃತ್ತಿ'ಗೆ ಪ್ರಾಧಾನ್ಯತೆ ಇದ್ದುದರಿಂದ ಅಂದಿನ ಕಾಲದಲ್ಲಿ ಅದನ್ನೇ ಅನುಸರಿಸುತ್ತಿದ್ದರು. ಈ ಪದ್ಧತಿ ಹಿಂದಿನಿಂದ ಪರಂಪರಾನುಗತವಾಗಿ ಬೆಳೆದುಬಂದಿರುವುದರಿಂದ ಮದುವೆಯ ಬಗ್ಗೆ ಯಾರೂ ಯೋಚಿಸುತ್ತಿರಲಿಲ್ಲ.

ಈ ಸಮಾಜದಲ್ಲಿ ನಿರ್ದಿಷ್ಟವಾದ ಜಾತಿ ವ್ಯವಸ್ಥೆಯನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಕರಾವಳಿ ಪ್ರದೇಶದಲ್ಲಿ ದೇವದಾಸಿ ಪದ್ಧತಿಯಲ್ಲಿ ಜಾತ್ಯಾತೀತವಾದುದು ಉತ್ತರ ಕರ್ನಾಟಕದಲ್ಲಿ ಗ್ರಾಮದೇವತೆಗಳಿಗೆ ಬಸವಿ ಬಿಡುವ ಪದ್ಧತಿ ಇದೆ. ಇದು ನಿರ್ದಿಷ್ಟ ಜಾತಿಗಳನ್ನು ಅವಲಂಬಿಸಿರುತ್ತದೆ. ಬಸ್ರೂರಿನ ದೇವದಾಸಿಯರ ಜಾತಿಯು ಕುಲಕಸುಬಾದಾರಿತವಾಗಿತ್ತು. ಅವರಿಗೆ ಅವರದೇ ಆದ ಒಂದು ನಿರ್ದಿಷ್ಟ ಧರ್ಮವಿಲ್ಲ. ತಮಗೆ ಪೋಷಣೆ ಒದಗಿಸುತ್ತಿದ್ದ ಧರ್ಮದವರೊಂದಿಗೆ ಗುರುತಿಸಿಕೊಳ್ಳಲು ಇಷ್ಟಪಡುತ್ತಾರೆ. ಇವರಿಗೆ ಜಾತಿಯ ನಿರ್ಧಿಷ್ಟತೆಯನ್ನು ಕಾಯ್ದುಕೊಳ್ಳುವ ಸಾಮಾಜಿಕ ನಿರ್ಬಂಧವಿದೆ. ಇಲ್ಲಿ ಅವರಿಗೆ ಎಲ್ಲ ವರ್ಗದ ವ್ಯಕ್ತಿಗಳ ಸಂಪರ್ಕವಿರುವುದರಿಂದ ಪ್ರತ್ಯೇಕತೆ ಎನ್ನುವುದು ಈ ಸಮಾಜದಲ್ಲಿ ಎದ್ದು ಕಾಣುತ್ತದೆ. ದೇವದಾಸಿಯರನ್ನು ಇಟ್ಟುಕೊಂಡಿರುವ ವ್ಯಕ್ತಿಗಳು ಅವರನ್ನು ಎಂದಿಗೂ ತಮ್ಮ ಕುಟುಂಬದೊಳಗೆ ಸೇರಿಸಿಕೊಳ್ಳುತ್ತಿರಲಿಲ್ಲ. ಅವರೊಂದಿಗೆ ದೈಹಿಕ ಸಂಬಂಧವನ್ನಷ್ಟೇ ಪಡೆದು ತಮ್ಮ ಕುಟುಂಬದಿಂದ ಹೊರಗೆ ಇರಿಸುತ್ತಿದ್ದರು. ಆದ್ದರಿಂದ ದೇವದಾಸಿಯರ ಮಕ್ಕಳು ತಮ್ಮ ತಾಯಿಯ

ಜಾತಿಯನ್ನೇ ಪ್ರತಿನಿಧಿಸುತ್ತಿದ್ದರು. ಕೆಲವರು ಇವರನ್ನು ಹಿಂದುಳಿದ ಜಾತಿಯವರು ಎಂದು ಪರಿಗಣಿಸಿದರೂ, ಇವರಿಗೆ ಉನ್ನತ ಕುಲದವರೊಂದಿಗೆ ಸಂಪರ್ಕವಿರುವುದರಿಂದ ಮುಂದುವರಿದ ಜನಾಂಗವೆಂದು ಕೆಲವರು ಹೇಳುತ್ತಾರೆ. ಆದ್ದರಿಂದ ಈ ಮನೆತನಗಳವರು ಪ್ರತ್ಯೇಕವಾದ ಒಂದು ಜನಾಂಗ ಎಂಬ ನಿರ್ಧಾರಕ್ಕೆ ಬರಬಹುದು. ದೇವದಾಸಿಯರ ಮಕ್ಕಳು ಹುಟ್ಟಿಸಿದ ಅಪ್ಪನಿಗೆ 'ಪಾಳ' ಎಂದು ಕರೆಯುತ್ತಿದ್ದರು. ಹುಟ್ಟಿಸಿದವನನ್ನು 'ಅಪ್ಪ' ಎಂದು ಕರೆಯುವುದು ಇವರಿಗೆ ನಿಷಿದ್ಧವಾಗಿತ್ತು. ಈ ಮಕ್ಕಳಿಗೆ ಸಾಮಾಜಿಕ ಮನ್ನಣೆ ಇತ್ತೇ ಹೊರತು ಇಂಥವರ ಮಕ್ಕಳು ಎಂದು ನಿರ್ದಿಷ್ಟವಾಗಿ ಸೂಚಿಸುವಂತಿರಲಿಲ್ಲ. ತಂದೆಯಾದವನ ಹೆಸರನ್ನು ಯಾವುದೇ ಸರಕಾರದ ಕಡತಗಳಿಗೆ ಸೂಚಿಸುವಂತಿರಲಿಲ್ಲ. ಮಕ್ಕಳು ತಾಯಿಯ ಹೆಸರನ್ನಷ್ಟೇ ಕಾಗದ ಪತ್ರಗಳಿಗೆ ಉಪಯೋಗಿಸುತ್ತಿದ್ದರು. ತನ್ನ ತಾಯಿಯಿಂದ ಬಂದಂತ ಜಾತಿಯನ್ನೇ ಅವಲಂಬಿಸುತ್ತಿದ್ದರು. ಹಿಂದೆ ಹೆಣ್ಣೇ ವಂಶ ಪ್ರವರ್ತಕಳಾಗಿದ್ದ ವಿಷಯ ಪುರಾಣಗಳಲ್ಲಿ ಕಂಡು ಬರುತ್ತದೆ. ತಾಯಿಯ ಹೆಸರಿನಿಂದ ಮಗುವನ್ನು ಗುರುತಿಸಲಾಗುತ್ತಿತ್ತು. ಬಿ.ಎಂ. ರೋಹಿಣಿಯವರ ಉಲ್ಲೇಖವನ್ನು ಈ ಸಂದರ್ಭದಲ್ಲಿ ಗಮನಿಸಬಹುದು. "ನಮ್ಮ ಪುರಾಣ ಕಥೆಗಳ ಸ್ತ್ರೀಯರಾದ ಅದಿತಿ, ದಿತಿ, ಜಬಾಲಾ, ವಿನಿತಾ, ಮೊದಲಾದವರ ಹೆಸರಿನಿಂದಲೇ ಅವರ ಮಕ್ಕಳನ್ನು ಕರೆಯಲಾಗುತ್ತಿತ್ತು. ತಂದೆ ಯಾರೆಂದು ತಾಯಿ ಕೊಡುವ ಅಭಿಪ್ರಾಯವೇ ಸಾಕಾಗುತ್ತಿತ್ತು." - (೨೦೦೦, ಪುಟ - ೪೦) ಮಾತೃ ಮೂಲೀಯ ಪದ್ಧತಿಯ ಮಹತ್ವವನ್ನು ಇಲ್ಲಿ ಗಮನಿಸಬಹುದು.

ದೇವದಾಸಿಯರ ಸಮಾಜದಲ್ಲಿ ಗಂಡಸರು ನಾಯಕ್, ರಾವ್, ಎಂದೂ ಹೆಂಗಸರು ನಾಯಕ ಸಾನಿ ಅಥವಾ ರೂಢಿಯಲ್ಲಿ 'ಬಾಯಿ' ಎಂದು ತಮ್ಮ ಹೆಸರಿನೊಂದಿಗೆ ಸೇರಿಸಿಕೊಳ್ಳುತ್ತಿದ್ದರು. ಇವರ ಮನೆಯನ್ನು ಮನೆತನದ ಪ್ರಸಿದ್ಧರ ಹೆಸರಿನಿಂದ ಕರೆಯುವುದು ವಾಡಿಕೆ. ಕಲೆ ಅಥವಾ ಮನೆಯ ಪ್ರಸಿದ್ಧರಿಂದ ಗುರುತಿಸಲ್ಪಡುತ್ತಿತ್ತು. ಉದಾ : ದುಗ್ಗಪ್ಪನ ಮನೆ. ಚಂದ್ರಾವತಿ ಮನೆ. ಬಾಬಿ ಮನೆ. ಇತ್ಯಾದಿ. ದೇವದಾಸಿಯರಿಗೆ ಹೆಣ್ಣು ಮಕ್ಕಳಿಲ್ಲದಿದ್ದಲ್ಲಿ ದತ್ತು ಸ್ವೀಕರಿಸುತ್ತಿದ್ದರು. ತಮಗೆ ಇಷ್ಟವಾದ ಹೆಣ್ಣುಮಗುವನ್ನು ಯಾರು ಕೊಡುತ್ತಾರೋ ಅವರಿಂದ ಪಡೆಯುತ್ತಿದ್ದರು. ಹೆಚ್ಚಾಗಿ ಕುಟುಂಬದೊಳಗೆ ದತ್ತು ಪಡೆಯುತ್ತಿದ್ದರು. ಈ ಮಗುವಿಗೆ ಶಾಸನ ಬದ್ಧವಾದ ಅಧಿಕಾರ ದೊರೆಯುತ್ತಿತ್ತು. ಈ ರೀತಿಯಲ್ಲಿ ಕುಟುಂಬ ರಚನೆಯು ವಿಶಿಷ್ಟ ರೀತಿಯಿಂದ ಕೂಡಿರುತ್ತಿತ್ತು.

### ೫.೨. ವಾಸ್ತು ವೈಶಿಷ್ಟ್ಯಗಳು

ಹಿಂದೆ ಬಸ್ರೂರಿನಲ್ಲಿ ಅರಸೊತ್ತಿಗೆ ಇದ್ದ ಕಾಲದಲ್ಲಿ ದೇವದಾಸಿಯರು ನೆಲೆಸುವ ಪ್ರತ್ಯೇಕವಾದ ಬೀದಿಯೇ ಇದ್ದಿತಂತೆ. ಈ ಬೀದಿಗಳ ಇಕ್ಕೆಲಗಳಲ್ಲಿದ್ದ ವಿಲಾಸಿ ಮಂದಿರಗಳಲ್ಲಿ ದೇವದಾಸಿಯರು ನೆಲೆಸುತ್ತಿದ್ದರಂತೆ. ವ್ಯಾಪಾರಕ್ಕಾಗಿಯೋ ಇನ್ನಿತರ ಕಾರಣಗಳಿಗಾಗಿಯೋ ಬಸ್ರೂರಿಗೆ ಬಂದವರು ವಿಲಾಸಿ ಮಂದಿರಗಳಲ್ಲಿ ತಂಗಿ

ಮೈ ಮನಗಳ ಧಣಿವನ್ನು ಆರಿಸಿಕೊಳ್ಳುತ್ತಿದ್ದರು. ಇಂತಹ ವಿಲಾಸಿ ಮಂದಿರಗಳಿದ್ದ ಕೇರಿಯನ್ನೇ 'ವಿಲಾಸಕೇರಿ' ಎಂದು ಕರೆಯುತ್ತಿದ್ದಿರಬಹುದು. ಆದರೆ ಈಗ ಅಲ್ಲಿ ಅಂತಹ ಯಾವ ವಿಲಾಸಿ ಮಂದಿರಗಳಿದ್ದ ಕುರುಹೂ ಕಾಣ ಸಿಗುವುದಿಲ್ಲ.

ಈಗ ರಾವುತಕೇರಿಯ ಮೂಡುಸಾಲು ಮತ್ತು ಪಡುಸಾಲಿನಲ್ಲಿ ದೇವದಾಸಿಯರ ಹಳೆಯಕಾಲದ ಕೆಲವು ಮನೆಗಳಿವೆ. ಇಲ್ಲಿರುವ ಕೆಲವು ಮನೆಗಳಲ್ಲಿ ದೇವದಾಸಿ ಮನೆತನದವರಿದ್ದರೆ ಕೆಲವು ಮನೆಗಳಲ್ಲಿ ಇತರ ಜಾತಿಯ ವ್ಯಕ್ತಿಗಳು ವಾಸವಾಗಿದ್ದಾರೆ. ಪ್ರಾಚೀನವಾದ ಈ ಮನೆಗಳು ಕಲಾತ್ಮಕವಾಗಿದ್ದು ಈಗಲೂ ಸುದೃಢವಾಗಿವೆ. ಮನೆಯ ಒಳರಚನೆಯು ಇತರ ಮನೆಗಳಿಗಿಂತ ಭಿನ್ನವಾಗಿದ್ದು ತುಂಬ ವೈಶಿಷ್ಟ್ಯಪೂರ್ಣವಾಗಿದೆ. ಊರಿನ ಧನಿಕರು, ಶ್ರೀಮಂತರು ಇವರ ಪೋಷಕರಾಗಿರುತ್ತಿದ್ದರಿಂದು ಅವರ ಘನಸ್ತಿಕೆಗೆ ತಕ್ಕಂತೆ ಮನೆಗಳನ್ನು ನಿರ್ಮಿಸಿಕೊಡುತ್ತಿದ್ದರು. ಇಲ್ಲವೆ ಮನೆ ಕಟ್ಟಲು ನೆರವು ನೀಡುತ್ತಿದ್ದರು. ಅಂದಿನ ದೇವದಾಸಿಯರ ವಿಲಾಸಿ ಜೀವನದ ಇನ್ನೊಂದು ಮುಖವನ್ನು ಈ ಮನೆಗಳು ಪ್ರತಿ ಬಿಂಬಿಸುತ್ತವೆ. ಈ ಮನೆಗಳಲ್ಲಿ ಸಾಮಾನ್ಯವಾಗಿ ಹೊರಗಿನ ಭಾಗದಲ್ಲಿ ಚಾವಡಿಯಿದ್ದು ಒಳಗಿನ ಭಾಗದಲ್ಲಿ ಪಡಸಾಲೆ, ಮಲಗುವ ಕೋಣೆಗಳು, ಅಡುಗೆಮನೆ, ದೇವರಕೋಣೆ, ಪ್ರತ್ಯೇಕವಾದ ಸ್ನಾನದ ಮನೆಗಳೆಲ್ಲ ಇವೆ. ಹೆಚ್ಚಿನ ಎಲ್ಲ ಮನೆಗಳು ಉಪ್ಪರಿಗೆಯನ್ನು ಹೊಂದಿವೆ. ಮೇಲೆ ಉಪ್ಪರಿಗೆಯಲ್ಲಿ ನಿಂತು ಹೊರಗಿನ ವ್ಯಕ್ತಿಗಳ ಚಲನವಲನಗಳನ್ನು ಗಮನಿಸಲು ಸಾಧ್ಯವಾಗುವಂತೆ ನಿರ್ಮಿಸಿರುವ ಸುಂದರವಾದ ಚಾವಣಿಗಳಿವೆ.

ಮನೆಯ ಹೊರಗಿನ ಚಾವಡಿಯಲ್ಲಿ ಬೃಹದಾಕಾರದ ಕಂಬಗಳಿವೆ. ಈ ಆಧಾರ ಸ್ತಂಬಗಳು 'ಮನೆಯ ಲಕ್ಷಣ' ಎನ್ನುವ ಪ್ರತೀತಿ ಇದೆ. ಈ ಕಂಬಗಳ ಅರ್ಧಭಾಗವು ಚಚ್ಚೌಕಾರವಾಗಿದ್ದು ಯಾವುದೇ ರೀತಿಯ ಕೆತ್ತನೆಗಳಿಲ್ಲದೆ ಹೊಳುಪಾದ ಮುಖವನ್ನು ಹೊಂದಿದೆ. ಮೇಲಿನ ಭಾಗವು 'ಅಷ್ಟ ಮುಖ'ವನ್ನು ಹೊಂದಿದ್ದು ಕಲಾತ್ಮಕವಾಗಿದೆ. ಹಿಂದಿನ ದಿನಗಳಲ್ಲಿ ಮನೆಯ ಚಾವಡಿಯಲ್ಲಿ ಜೋಕಾಲಿ ಅಥವಾ ಮಂಚ ಇರುತ್ತಿತ್ತು. ಮನೆಗೆ ಬಂದ ವಿಟಪುರುಷರನ್ನು ಈ ಮಂಚಗಳಲ್ಲಿ ಕೂರಿಸಿ ತಾಂಬೂಲಾದಿಗಳನ್ನು ನೀಡಿ ಉಪಚರಿಸುತ್ತಿದ್ದರು. ತಾಂಬೂಲ ತಿಂದು ಉಗುಳುವುದಕ್ಕಾಗಿ ಹತ್ತಿರದಲ್ಲಿಯೇ 'ಪೀಕಧಾನಿ' ಇಡುತ್ತಿದ್ದರಂತೆ.

ಮನೆಯ ಒಳಭಾಗವೇ ನಡುಮನೆ ಅಥವಾ ಪಡಸಾಲೆ. ಇದರ ಪ್ರವೇಶ ಧ್ವಾರವು ಚಿಕ್ಕದಾಗಿದ್ದು ಒಳಹೋಗುವವರು ಭಾಗಿಕೊಂಡು ಹೋಗಬೇಕಾಗುತ್ತದೆ. ಇದನ್ನು 'ಆಯ ಬಾಗಿಲು' ಎಂದು ಕರೆಯುತ್ತಾರೆ. ಈ ಬಾಗಿಲು ಮತ್ತು (ಬಾಗಿಲವಾಡ) ಗಳನ್ನು ಕುಸುರಿ ಕೆಲಸಗಳಿಂದ ರಚಿಸಲಾಗಿದೆ. ಪಡಸಾಲೆಯ ಇಕ್ಕೆಲಗಳಲ್ಲಿ ಮಲಗುವ ಕೋಣೆ ಮತ್ತು ಪ್ರತ್ಯೇಕವಾದ ದೇವರ ಕೋಣೆಯಿದೆ. ಪಡಸಾಲೆಯ ಒಳಗಿನ ಕೋಣೆಯಿಂದ ಮೇಲೆ ಉಪ್ಪರಿಗೆಗೆ ಹೋಗಲು ಮರದ ಏಣಿ ಇಡಲಾಗಿದೆ. ಈ ಮನೆಯ ವಿಶೇಷತೆ ಏನೆಂದರೆ ಮೇಲೆ ಮಹಡಿ ಏರಲು ಪ್ರತ್ಯೇಕವಾದ ಎರಡು ದಾರಿಗಳನ್ನು ಇಡಲಾಗಿದೆ. ಒಂದು ಪಡಸಾಲೆಯ ಒಳಗಿನ ಕೋಣೆಯಿಂದ ಇದ್ದರೆ ಇನ್ನೊಂದು ಹೊರಗಿನ

ಚಾವಡಿಯಲ್ಲಿದೆ. ಈ ರೀತಿಯ ನಿರ್ಮಾಣಕ್ಕೆ ಬೇರೆಯೇ ಆದ ಕಾರಣವಿದೆ. ದೇವದಾಸಿಯರ ಮನೆಗೆ ನಾನಾ ಅಂತಸ್ಥಿನ ವ್ಯಕ್ತಿಗಳು ಬರುತ್ತಿದ್ದರು. ಮನೆಯಲ್ಲಿ ಅಂತಹ ವ್ಯಕ್ತಿಗಳ ಮುಖಾಮುಖಿಯನ್ನು ತಪ್ಪಿಸುವುದಕ್ಕಾಗಿ ಈ ವ್ಯವಸ್ಥೆಯನ್ನು ಮಾಡಲಾಗಿದೆ. ಗಣ್ಯರು ಬರುವಾಗ ಮೇಲಿರುವ ವ್ಯಕ್ತಿಗಳನ್ನು ಒಳಗಿನ ಏಣಿಯಿಂದ ಮನೆಯ ಹಿಂಭಾಗದಲ್ಲಿ ಕಳುಹಿಸುತ್ತಿದ್ದರು. ಹೀಗೆ ಒಬ್ಬರು ಚಾವಡಿಯಲ್ಲಿರುವ ಏಣಿಯಿಂದ ಮೇಲೆ ಬಂದರೆ, ಮೇಲಿರುವವರು ಪಡಸಾಲೆಯಲ್ಲಿರುವ ಏಣಿಯ ಮೂಲಕ ಇಳಿದು ಹೋಗುತ್ತಿದ್ದರು.

ಮೇಲಿನ ಮಹಡಿಯಲ್ಲಿರುವ ಚಿಕ್ಕ ಚಿಕ್ಕ ಕೋಣೆಗಳು ಕೂಡಾ ತುಂಬ ವಿಶೇಷವಾಗಿವೆ. ಕೋಣೆಯ ಬಾಗಿಲುಗಳು ಚಿಕ್ಕದಾಗಿದ್ದು ಓರ್ವ ವ್ಯಕ್ತಿ ಬಾಗಿಕೊಂಡು ಒಳ ಹೋಗುವಷ್ಟು ಮಾತ್ರ ಸ್ಥಳಾವಕಾಶವಿದೆ. ಇದರ ಬಾಗಿಲುಗಳು ಗೋಡೆಯನ್ನು ಹೊಂದಿಕೊಂಡಿದ್ದು ತೋರಿಕೆಗೆ ಗೋಡೆಯಲ್ಲಿ ಅಳವಡಿಸಿರುವ ಗವಾಕ್ಷದಂತಿವೆ. ಬಾಗಿಲು ತೆರೆದಾಗಲೇ ಒಳಗೆ ಕೋಣೆ ಇರುವ ವಿಷಯ ಗಮನಕ್ಕೆ ಬರಲು ಸಾಧ್ಯ. ಈ ಕೋಣೆಗಳನ್ನು ವೇಶ್ಯಾವೃತ್ತಿಗಾಗಿಯೇ ವಿಶೇಷವಾಗಿ ನಿರ್ಮಿಸಲಾಗಿದೆ. ಈ ರೀತಿಯ ರಚನೆ ಊರಿನ ಇತರ ಯಾವ ಮನೆಗಳಲ್ಲೂ ಕಂಡುಬರುವುದಿಲ್ಲ. ಹಿಂದೆ ಇಲ್ಲಿ ದೇವದಾಸಿಯರು ಹೊರಗಿನಿಂದ ಬರುವ ವಿಟಪುರುಷರನ್ನು ತೃಪ್ತಿಪಡಿಸುತ್ತಿದ್ದರು.



ಅಧ್ಯಾಯ : ೬

# ದೇವದಾಸಿ ಮತ್ತು ಸಂಸ್ಕೃತಿ

ಸಂಸ್ಕೃತಿಯು ಮಾನವ ಜೀವನದ ಸಮಗ್ರ ಸಂಕೀರ್ಣತೆಯ ಕಲ್ಪನೆಯನ್ನು ಮೂಡಿಸುವಂಥದ್ದಾಗಿರುತ್ತದೆ. ಇದು ಮಾನವನ ಆಂತರಿಕ ಮತ್ತು ಬಾಹ್ಯ ಜೀವನವನ್ನು ಅಭಿವ್ಯಕ್ತಗೊಳಿಸುತ್ತದೆ. ಒಂದು ಜನಾಂಗದ ಸಂಸ್ಕೃತಿಯ ಅಧ್ಯಯನವೆಂದರೆ ಅವರು ರೂಢಿಸಿಕೊಂಡು ಬಂದ ಜೀವನದ ಮೌಲ್ಯಗಳೇ ಆಗಿವೆ. ಅವರ ಬದುಕಿನ ಸಮಗ್ರ ಅಂಶಗಳಲ್ಲಿ ಸಂಸ್ಕೃತಿ ಹಾಸು ಹೊಕ್ಕಾಗಿದೆ.

ಭಾರತೀಯ ಸಂಸ್ಕೃತಿಯಲ್ಲಿ ದೇವದಾಸಿಯರಿಗೆ ಪ್ರಮುಖವಾದ ಸ್ಥಾನವಿತ್ತು. ಸಾವಿಲ್ಲದ ದೇವರನ್ನು ಮದುವೆಯಾದ ಇವರು ನಿತ್ಯ ಸುಮಂಗಲೆಯರು. ನಿತ್ಯ ಸುಮಂಗಲೆಯರೆನಿಕೊಂಡ ಇವರು ಬಾರದೆ ಯಾವುದೇ ಮಂಗಳ ಕಾರ್ಯಗಳು ಜರುಗುತ್ತಿರಲಿಲ್ಲ. ಕಲೆಯ ದೃಷ್ಟಿಯಿಂದ ದೇವದಾಸಿಯರ ಕೊಡುಗೆ ಅಪಾರವಾದುದು. ಸಂಗೀತ ನರ್ತನ ಕಲೆಗಳ ಆರಾಧಕರಾಗಿ ಆ ಕಲೆ ಹಿಂದಿನಿಂದ ಇಂದಿನವರೆಗೆ ಬೆಳೆದು ಬರಲು ದೇವದಾಸಿಯರೇ ಬಹು ಮಟ್ಟಿಗೆ ಕಾರಣ. ದೇವಾಲಯಗಳಲ್ಲಿ ಕಲೆಯ ನೈಜ ಪ್ರಚಾರದೊಂದಿಗೆ ಭಕ್ತರಿಗೆ ಮಾನಸಿಕ ಹಾಗೂ ದೈವಿಕ ನೆಮ್ಮದಿಯನ್ನು ಇವರು ದೊರಕಿಸಿ ಕೊಡುತ್ತಿದ್ದರು. ದೇವದಾಸಿಯರು ತಮ್ಮ ಬದುಕನ್ನು, ವಿದ್ಯೆಯನ್ನು ಭಗವಂತನ ಸೇವೆಗೆ ಮುಡಿಪಾಗಿಟ್ಟುಕೊಂಡಿದ್ದರಿಂದ ಅವರ ಬಗೆಗೆ ಗೌರವ ಮೂಡುವುದು ಸಹಜವಾದುದೆ. ಸುಮಾರು ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದವರೆಗೂ ನೃತ್ಯ, ಸಂಗೀತ, ನಾಟಕ ಮೊದಲಾದ ಕಲೆಗಳಲ್ಲಿ ಪರಿಣತಿ ಹೊಂದುವ ಅವಕಾಶವನ್ನು ಈ ಸ್ತ್ರೀ ವರ್ಗ ಮಾತ್ರವೇ ಪಡೆದಿತ್ತು. ಅಂದಿನ ಸಮಾಜದಲ್ಲಿ ಅವರಿಗಿದ್ದ ಸ್ಥಾನಮಾನ, ಧಾರ್ಮಿಕ ಮನ್ನಣೆಯನ್ನು ಇಂದು ಯೋಚಿಸುವುದು ಕೂಡಾ ಕಷ್ಟಸಾಧ್ಯ.

## ೬.೧. ದೇವದಾಸಿ ಮತ್ತು ದೇವಾಲಯ

ಹಿಂದೆ ದೇವಾಲಯಗಳು ಊರಿನ ಸಾಂಸ್ಕೃತಿಕ ಅಭಿವ್ಯಕ್ತಿಯ ಕೇಂದ್ರಗಳಾಗಿದ್ದವು ಊರಿನ ಪ್ರತಿಯೊಂದು ಚಟುವಟಿಕೆಗಳೂ ಈ ದೇವಾಲಯಗಳಿಂದಲೇ ನಡೆಸಲ್ಪಡುತ್ತಿದ್ದವು. ಕಲೆಗಳ ಉಗಮ ಮತ್ತು ವಿಕಾಸವು

ದೇವಾಲಯಗಳನ್ನೇ ಅವಲಂಬಿಸಲ್ಪಟ್ಟಿತ್ತು. ಶಿಕ್ಷಣ, ಸಂಗೀತಾದಿಗಳು ಇಲ್ಲಿಯೇ ಕಲಿಸಲ್ಪಡುತ್ತಿದ್ದವು. ಇಂದಿಗೂ ಯಕ್ಷಗಾನಾದಿ ಕಲೆಗಳೆಲ್ಲ ದೇವರ ಹೆಸರಿನಿಂದ ಮತ್ತು ದೇವಾಲಯಗಳಿಂದಲೇ ತಿರುಗಾಟಕ್ಕೆ ಹೊರಡುತ್ತವೆ. ಇಂದಿನ ಹೆಚ್ಚಿನ ಕಲಾಪ್ರಕಾರಗಳೆಲ್ಲ ಉಳಿದಿರುವುದು ದೇವಾಲಯಗಳಿಂದಲೇ. ದೇವಾಲಯಗಳ ಧಾರ್ಮಿಕ ಹಿನ್ನೆಲೆಯಲ್ಲಿ ಭಕ್ತಿ ಮತ್ತು ಕಲೆಯ ಪ್ರಚಾರ ಎರಡೂ ಒಟ್ಟಿಗೆ ಸಾಗುತ್ತದೆ.

ದೇವಾಲಯಗಳೆಲ್ಲ ರಾಜ ಪೋಷಿತವಾಗಿದ್ದ ಕಾಲದಲ್ಲಿ ಅಲ್ಲಿನ ಆರ್ಥಿಕ ಪರಿಸ್ಥಿತಿಯು ಉತ್ತಮವಾಗಿರುತ್ತಿತ್ತು. ವರ್ತಕರು, ಶ್ರೀಮಂತರು ಮೊದಲಾದವರುಗಳು ದೇವಸ್ಥಾನಗಳ ಪೋಷರಾಗಿರುತ್ತಿದ್ದರು. ಇದರಿಂದ ಕಾಲಕಾಲಕ್ಕೆ ದೇವರ ಧಾರ್ಮಿಕ ಕ್ರಿಯಾದಿಗಳೊಂದಿಗೆ ಸಾಂಸ್ಕೃತಿಕ ಚಟುವಟಿಕೆಗಳೂ ಜರುಗುತ್ತಿದ್ದವು. ಬಸ್ರೂರಿನಲ್ಲಿ ದೇವಾಲಯದ ದೈನಂದಿನ ಕ್ರಿಯಾವಿಧಿಗಳನ್ನು ನಿರ್ವಹಿಸಲು ಬೇಕಾದ ವ್ಯವಸ್ಥೆಯು ಇರುತ್ತಿತ್ತು. ಪೂಜೆಯವರು, ಕೀಳ್‌ಶಾಂತಿ, ದೇವದಾಸಿಯರು, ಮಂಗಳವಾದ್ಯದವರು, ಮೊದಲಾದವರು ಇರುತ್ತಿದ್ದರು. ಇದರಲ್ಲಿ ಕೆಲವು ವರ್ಗದವರು ಮಾತ್ರ 'ಶ್ರೀ ಮಹಾಲಿಂಗೇಶ್ವರನ ' ಸೇವೆಯಲ್ಲಿದ್ದಾರೆ.

ಅರ್ಚಕರು ದೇವರ 'ಅಂಗಭೋಗದ' ಸೇವೆಯನ್ನು ಮಾಡಿದರೆ ದೇವದಾಸಿಯರು 'ರಂಗಭೋಗದ' ಸೇವೆ ಮಾಡುತ್ತಿದ್ದರು. ಇವರಿಗೆ ದೇವಾಲಯದಲ್ಲಿ ವೃತ್ತಿಯು ಅನುವಂಶೀಯವಾಗಿ ಬರುತ್ತಿತ್ತು. ಇವರು ದೇವಾಲಯಗಳಲ್ಲಿ ಭಕ್ತಿಯೊಂದಿಗೆ ಭಕ್ತರಿಗೆ ಮನೋರಂಜನೆಯನ್ನು ಒದಗಿಸುವ ಕಾರ್ಯವನ್ನು ಮಾಡುತ್ತಿದ್ದರು. ದೇವರಿಗೆ ಅರ್ಚನೆಯ ಒಂದು ಅಂಗವಾಗಿ ಪ್ರಾಧಾನ್ಯತೆ ಪಡೆದಿದ್ದ ನೃತ್ಯಗಾತಿಯರು ದೇವರಿಗೆ ತಮ್ಮ ದೇಹವನ್ನು ಪ್ರಾರ್ಥನಾ ರೂಪದಲ್ಲಿ ಮುಡಿಪಾಗಿಡುತ್ತಿದ್ದರು.

ದೇವದಾಸಿಯರು ತಮ್ಮ ದೈನಂದಿನ ಸೇವೆಯೊಂದಿಗೆ ದೇವಸ್ಥಾನದಲ್ಲಿ ಕಸಗುಡಿಸುವುದು, ರಂಗೋಲಿಹಾಕುವುದು, ಹೂ ಕಟ್ಟುವುದು ಇತ್ಯಾದಿ ಸೇವಾ ಕಾರ್ಯ ಮಾಡುತ್ತಿದ್ದರು. ರಥೋತ್ಸವದ ವಿಶೇಷ ದಿನಗಳಲ್ಲಿ ದಿನಸಿಗಳನ್ನು ಸ್ವಚ್ಛ ಮಾಡಿಕೊಡುವುದು, ಆ ದಿನಗಳಲ್ಲಿ ಹಾಕುವ ಬಲಿಯನ್ನು ತೆಗೆದು ಹಾಕುವುದು, ಇತ್ಯಾದಿಯನ್ನು ಕೂಡಾ ಮಾಡುತ್ತಿದ್ದರು. ದೇವಾಲಯದಲ್ಲಿ ಇವರಿಗೆ ಸುಕನಾಸಿನಿಯವರಿಗೆ ಬರಲು ಅವಕಾಶವಿತ್ತು.

ಹಿಂದೆ ಗ್ರಾಮೀಣ ಪ್ರದೇಶಗಳಲ್ಲಿ ಯಾವುದೇ ರೀತಿಯ ಮನೋರಂಜನೆಗಳು ಇರುತ್ತಿರಲಿಲ್ಲ. ಅದರಲ್ಲೂ ಕರಾವಳಿ ಪ್ರದೇಶಗಳಲ್ಲಿ ದೇವರ ಉತ್ಸವ, ಕೋಲು, ಕಂಬಳ, ಯಕ್ಷಗಾನಗಳನ್ನು ಬಿಟ್ಟರೆ, ಬೇರೇನೂ ಮನೋರಂಜನೆ ಇರುತ್ತಿರಲಿಲ್ಲ. ವರ್ಷಕ್ಕೊಮ್ಮೆ ಊರಿನ ಜಾತ್ರೆ ನಡೆಯುತ್ತಿತ್ತು. ಈ ಜಾತ್ರೆಗಳಲ್ಲಿ ದೇವರ ಸೇವೆಯೊಂದಿಗೆ ಜನರ ಕೊಂಡುಕೊಳ್ಳುವ ವ್ಯವಹಾರವೂ ನಡೆಯುತ್ತಿತ್ತು. ಜಾತ್ರೆಗಳು ಸುಮಾರು ಏಳರಿಂದ ಹತ್ತು ದಿನಗಳವರೆಗೆ ನಡೆಯುತ್ತಿದ್ದವು. ಜನರು ತಮಗೆ ವರ್ಷಕ್ಕೆ ಬೇಕಾಗುವ ಸಾಮಾನು ಸರಂಜಾಮುಗಳನ್ನು ಕೊಂಡುಕೊಳ್ಳುತ್ತಿದ್ದರು.

ಈ ಸಂದರ್ಭಗಳಲ್ಲಿ ಭಕ್ತರಿಗೆ ಭಕ್ತಿ, ಪೂಜೆ ಮೊದಲಾದವುಗಳ ಜೊತೆಗೆ ಮನೋರಂಜನೆ ಈ ನೃತ್ಯಾದಿಗಳಿಂದ ದೊರೆಯುತ್ತಿತ್ತು.

ದೇವದಾಸಿ ಮೊದಲಾದ ದೇವಾಲಯದ ಸೇವೆಗೆ ಸಂಬಂಧಪಟ್ಟವರು ದೇವಾಲಯಗಳ ಸಮೀಪವೇ ವಾಸಿಸುತ್ತಿದ್ದರು. ಅದರಲ್ಲಿ ಕೆಲವರಿಗೆ ದೇವಾಲಯಗಳಿಂದ ಭೂಮಿಯನ್ನು ಉಂಬಳಿ ಬಿಡುತ್ತಿದ್ದರು. ಬಸ್ರೂರಿನಲ್ಲಿ ದೇವದಾಸಿಯರಿಗೆ ದೇವಾಲಯದಿಂದ ಭೂಮಿ ಉಂಬಳಿ ಬಿಟ್ಟ ಬಗ್ಗೆ ಎಲ್ಲೂ ಉಲ್ಲೇಖ ಕಂಡುಬರುವುದಿಲ್ಲ. ಹಿಂದೆ ದೇವಸ್ಥಾನದಲ್ಲಿ ದೇವದಾಸಿಯರ ಸೇವೆಗೆ ವರ್ಷಕ್ಕೆ ನಲ್ವತ್ತು ವರಹ ಮತ್ತು ಐದುಮುಡಿ ಅಕ್ಕಿ ಕೊಡುತ್ತಿದ್ದರೆಂದು ದೇವಾಲಯದವರು ಹೇಳುತ್ತಾರೆ. ನಂತರದ ದಿನಗಳಲ್ಲಿ ದೇವಾಲಯದಿಂದ ಹಣ ತೆಗೆದುಕೊಳ್ಳುವುದನ್ನು ನಿಲ್ಲಿಸಿದರಂತೆ. ಅದು ದೇವರ ಹಣ ಎನ್ನುವ ದೃಷ್ಟಿಯಿಂದ ತೆಗೆದುಕೊಳ್ಳುತ್ತಿರಲಿಲ್ಲವೆಂದು ಈಗ ಇರುವ ಹಿರಿಯ ದೇವದಾಸಿ ಶ್ರೀಮತಿ ಗೌರಿ ಹೇಳುತ್ತಾರೆ. ಅಲ್ಲದೆ ನಿತ್ಯಪೂಜೆಯಾದ ಬಳಿಕ ದೇವರಿಗೆ ನೈವೇದ್ಯವಾದ ಭಕ್ಷ್ಯ ಇವರಿಗೆ ಸಲ್ಲುತ್ತಿತ್ತು. ದೇವಸ್ಥಾನದಲ್ಲಿ 'ಹರಿವಾಣ ನೈವೇದ್ಯ' ಎನ್ನುವ ವಿಶೇಷ ಪೂಜೆ ನಡೆಯುತ್ತಿತ್ತು. ಪೂಜೆಗೆ ವಡೆ, ಸುಕುನುಂಡೆ ಇತ್ಯಾದಿಗಳನ್ನು ಮಾಡುತ್ತಿದ್ದರು. ಆ ಪ್ರಸಾದ ರೂಪದ ಭಕ್ಷ್ಯವನ್ನು 'ಶಿವನೈರ್ಮಲ್ಯ' ಎಂದು ಕರೆಯುತ್ತಿದ್ದರು. ಅದನ್ನು ಯಾರು ತೆಗೆದುಕೊಂಡು ಹೋಗುತ್ತಿರಲಿಲ್ಲ. ಬ್ರಾಹ್ಮಣರು ಈಗಲೂ ತೆಗೆದುಕೊಂಡು ಹೋಗವುದಿಲ್ಲ. ಅದನ್ನು ದೇವದಾಸಿಯರೇ ತೆಗೆದುಕೊಂಡು ಹೋಗಬೇಕು. ಅದರ ಅಧಿಕಾರ ಅವರಿಗೆ ಮೀಸಲಾಗಿತ್ತು. ಇತರ ಯಾರಾದರೂ ಬಯಸಿದಲ್ಲಿ ಅದನ್ನು ಅವರಿಂದ ಕೇಳಿ ಪಡೆಯಬಹುದಾಗಿತ್ತು.

ದೇವಾಲಯದಲ್ಲಿ ಅವರಿಗೆ ಮುಕ್ತವಾದ ಸ್ವಾತಂತ್ರ್ಯವಿತ್ತು. ಅವರ ವೈಯಕ್ತಿಕ ಜೀವನದ ಬಗ್ಗೆ ಯಾವುದೇ ರೀತಿಯ ನಿರ್ಬಂಧಗಳು ಇರುತ್ತಿರಲಿಲ್ಲ. ದೇವಾಲಯ ಅವರ ಕಲಾಸೇವೆಯನ್ನಷ್ಟೇ ಬಯಸುತ್ತಿತ್ತು. ಅವರ ವೈಯಕ್ತಿಕ ಜೀವನವನ್ನಲ್ಲ. ಆದರೂ ವೈಯಕ್ತಿಕ ಜೀವನದಲ್ಲಿ ನಿಯತ್ತಿನಿಂದ ಬಾಳಬೇಕೆಂದು ದೇವಾಲಯ ಆಶಿಸುತ್ತಿತ್ತು.

### ೬.೨. ದೇವದಾಸಿ ಮತ್ತು ಲಲಿತಕಲೆಗಳು

ಪ್ರಾಚೀನ ಕಾಲದಿಂದಲೂ ನೃತ್ಯ, ಸಂಗೀತಾದಿ, ಲಲಿತಕಲೆಗಳಲ್ಲಿ ಪರಿಣತಿ ಹೊಂದುವ ಅವಕಾಶ ಹೆಚ್ಚಾಗಿ ದೇವದಾಸಿಯರಿಗೆ ಇರುತ್ತಿತ್ತು. ಇವರು ಆ ಕಲೆಗಳಿಂದಲೇ ಗುರುತಿಸಿಕೊಳ್ಳುವಂತ ಜನಾಂಗ. ಈ ಸಮುದಾಯದ 'ಕುಲಕಸುಬೇ' ಕಲಾ ಪ್ರಕಾರಗಳು ಆಗಿರುವುದರಿಂದ ಇವರಲ್ಲಿ ಹೆಚ್ಚಿನವರು ಹುಟ್ಟು ಕಲಾವಿದರು. ಹಿಂದೆ ಅವರಲ್ಲಿ ಉನ್ನತವಾದ ಒಂದು ಕಲೆ ಇದ್ದುದರಿಂದ ಸಮಾಜದಲ್ಲಿ ಗೌರವ ಮತ್ತು ಮಾನ್ಯತೆ ಇತ್ತು.

ದೇವದಾಸಿಯರ ನೃತ್ಯ ಪರಂಪರಾನುಗತವಾದ 'ಭರತ್ಯನಾಟ್ಯ' ಶೈಲಿಯೇ ಆಗಿತ್ತು. ದೇವಾಲಯದ ನೃತ್ಯದಲ್ಲಿ ಕಚ್ಚೆ ಹಾಕುತ್ತಿದ್ದರು. ಸುಂದರವಾಗಿ ಅಲಂಕರಿಸಿಕೊಂಡು ತಲೆಗೆ ಜಡೆ ಬಿಲ್ಲೆ - ತೋಳ್ಬಳೆ, ಬಳೆ, ಸೊಂಟಕ್ಕೆ ನಡುಪಟ್ಟಿ, ಧರಿಸುತ್ತಿದ್ದರು. ಹಿಮ್ಮೇಳದಲ್ಲಿ ಮದ್ದಳೆ, ತಾಳ, ಹಾರ್ಮೋನಿಯಂಗಳನ್ನು ಬಾರಿಸುತ್ತಿದ್ದರು. ಇವರ ಅಣ್ಣ, ತಮ್ಮ, ಅಥವಾ ಸೋದರಮಾವ ಹಿಮ್ಮೇಳ ಒದಗಿಸುತ್ತಿದ್ದರು.

ದೇವದಾಸಿಯರು ದೇವಸ್ಥಾನಕ್ಕೆ ಸಂಬಂಧಿಸಿದ ಹಾಡು ಕುಣಿತಗಳಲ್ಲದೆ ವಿವಿಧ ಕಲೆಗಳಲ್ಲಿ ಪಾರಂಗತರಾಗಿರುತ್ತಿದ್ದರು. ಸಂಗೀತದ ಇತರ ವಾದನಗಳಾದ ಜಲತರಂಗ, ವೀಣೆ, ಪಿಟೀಲು, ಹಾರ್ಮೋನಿಯಂ, ಮೊದಲಾದವುಗಳಲ್ಲಿ ಪರಿಣತಿಯನ್ನು ಪಡೆಯುತ್ತಿದ್ದರು. ಹಿಂದೆ ಇವರ ಮನೆಗಳಲ್ಲಿ ಸಂಗೀತದ ಪ್ರತಿಯೊಂದು ಉಪಕರಣಗಳೂ ಇರುತ್ತಿದ್ದವು. ಸಂಗೀತದಲ್ಲಿ 'ಕರ್ನಾಟಕ' ಮತ್ತು 'ಹಿಂದೂಸ್ಥಾನಿ' ಶೈಲಿಗಳನ್ನು ಅಭ್ಯಾಸ ಮಾಡುತ್ತಿದ್ದರು. ಅಲ್ಲದೆ ಊರಿನ ಶ್ರೀಮಂತರು ತಮ್ಮ ಮಕ್ಕಳಿಗೆ ಸಂಗೀತ ಕಲಿಸುವುದಕ್ಕಾಗಿ ದೇವದಾಸಿಯರನ್ನು ಕರೆಸಿ ಪಾಠ ಹೇಳಿಸಿಕೊಳ್ಳುತ್ತಿದ್ದರು. ಯಾಕೆಂದರೆ ಅಂದು ಇತರ ಸಮಾಜದಲ್ಲಿ ಹುಡುಗಿಯರಿಗೆ ಮದುವೆಯಾಗಬೇಕಾದರೆ ಗಂಡಿನ ಎದುರಲ್ಲಿ ಹಾಡಬೇಕಿತ್ತು. ಆಕೆ ಸಂಗೀತದಲ್ಲಿ ಕುಶಲೆಯಾಗಿರಬೇಕಾಗಿತ್ತು. ಅದಕ್ಕಾಗಿ ಸಂಗೀತ ಕಲಿಸಲು ಹೋಗುತ್ತಿದ್ದರು. ಇವರ ಪೋಷಣೆಯನ್ನು ಆ ಶ್ರೀಮಂತರುಗಳು ಮಾಡುತ್ತಿದ್ದರು. ಮತ್ತು ಸಂಗೀತ ನೃತ್ಯಾಸಕ್ತಿ ಇರುವ ಊರಿನ ಶ್ರೀಮಂತರು ಇವರನ್ನು ಮನೆಗೆ ಕರೆಸಿ ಸಂಗೀತ ಕಛೇರಿಗಳನ್ನು ನಡೆಸುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ಸಂಗೀತ ಕಛೇರಿಗಳನ್ನು ನಡೆಸುವುದಕ್ಕಾಗಿ ದೂರದ ಊರುಗಳಿಂದ ಇವರಿಗೆ ಆಮಂತ್ರಣವೂ ಬರುತ್ತಿತ್ತು.

ದೇವದಾಸಿಯರು ಮದುವೆ ಮೊದಲಾದ ಸಮಾರಂಭಗಳಲ್ಲಿಯೂ ತಮ್ಮ ಕಲಾಪ್ರೌಢಿಮೆಯನ್ನು ಪ್ರದರ್ಶಿಸುತ್ತಿದ್ದರು. ಹಲವಾರು ವರ್ಷಗಳ ಹಿಂದೆ ಬಸ್ರೂರಿನಲ್ಲಿ 'ಮೇಳ'ವಿತ್ತು ರೂಢಿಯಲ್ಲಿ ಇದನ್ನು 'ಸೂಳೇರ ಮೇಳ' ಎಂದು ಕರೆಯುತ್ತಿದ್ದರು. ಊರಿನ ಶ್ರೀಮಂತ ವ್ಯಕ್ತಿಗಳು ತಮ್ಮ ಮನೆಯ ಮದುವೆ ಮೊದಲಾದ ಮಂಗಳ ಕಾರ್ಯಕ್ಕೆ ಸೂಳೇರ ಮೇಳಕ್ಕೆ 'ವೀಳ್ಯ' ವಿತ್ತು ಗೌರವಾದರಗಳಿಂದ ಆಮಂತ್ರಿಸುತ್ತಿದ್ದರು. ಮೇಳದಲ್ಲಿ ಮಾಡುವ ಶೃಂಗಾರವೇ ಬೇರೆ ಇತ್ತು. ಮೈ ತುಂಬ ಆಭರಣ ಹಾಕಿಕೊಂಡು, ಸುಂದರವಾಗಿ ಅಲಂಕರಿಸಿಕೊಂಡು ಹೋಗುತ್ತಿದ್ದರು.

ಮೇಳದಲ್ಲಿ ಕುಣಿತ ಮತ್ತು ಹಾಡು ಪ್ರಧಾನವಾಗಿದ್ದು ರಸಿಕರನ್ನು ಮೆಚ್ಚಿಸುವ 'ದೌಲತ್ ಜ್ಯಾದಾ' (ಸಂಪತ್ತು ಅಧಿಕವಾಗಲಿ) ಕಾರ್ಯಕ್ರಮ ವಿಶೇಷವಾಗಿರುತ್ತಿತ್ತು. ಇದೊಂದು ಸಭಾಕಾರ್ಯಕ್ರಮ. ಪ್ರಾರಂಭದಲ್ಲಿ ಹಿಮ್ಮೇಳದೊಂದಿಗೆ ನೃತ್ಯ ಕಾರ್ಯಕ್ರಮ ನಡೆಯುತ್ತಿತ್ತು. ನಂತರ ಶ್ರೀಮಂತರೊಬ್ಬರು ಪ್ರಮುಖರ ಹೆಸರು ಹೇಳಿ 'ದೌಲತ್ ಜ್ಯಾದಾ' ಎಂದು ದೇವದಾಸಿಯರ ಮೇಲೆ ಹಣ ಎಸೆಯುತ್ತಿದ್ದರು. ಆಗ ನರ್ತಿಸುತ್ತಿದ್ದವಳು ಸಭೆಯ ಮುಂದೆ ಹೋಗಿ ಆ ಪ್ರಮುಖರ ಹೆಸರು ಹೇಳಿ ಬಾಗಿ 'ಸಲಾಂ' ಮಾಡಿ 'ದೌಲತ್ ಜ್ಯಾದಾ' ಹೇಳುತ್ತಿದ್ದಳು.

ಬಳಿಕ ಪ್ರಮುಖರ ಬಳಿಗೆ ಹೋಗಿ ಗಂಧ, ಅಕ್ಷತೆ, ಹೂ, ಪನ್ನೀರುಗಳಿಂದ ಉಪಚರಿಸಿ ಅವರ ತೊಡೆಯ ಮೇಲೆ ಕುಳಿತುಕೊಳ್ಳುತ್ತಿದ್ದಳು. ಉಪಚಾರ ಪಡೆದವರು ತನ್ನ ಹೆಸರನ್ನು ಹೇಳಿದವರಿಗೆ 'ದೌಲತ್ ಜ್ಯಾದಾ' ಹೇಳಿ ಅವರಿಗಿಂತ ಹೆಚ್ಚು ಹಣವನ್ನು ಎಸೆಯುವುದು ಪ್ರತಿಷ್ಠೆಯಾಗಿತ್ತು. ಹೀಗೆ ಎಸೆಯುವುದರಲ್ಲಿ ಶ್ರೀಮಂತರೊಳಗೆ ಸ್ಪರ್ಧೆಯೇ ನಡೆಯುತ್ತಿತ್ತು. ಬಹುಶ: ಈ ಪದ್ಧತಿ ಮುಸ್ಲಿಮರ ಆಳ್ವಿಕೆಯ ಕಾಲದಲ್ಲಿ ಪ್ರಚಲಿತಕ್ಕೆ ಬಂದಿರಬಹುದು. ಉತ್ತರ ಭಾರತದ ಕೆಲವು ರಾಜ್ಯಗಳಲ್ಲಿ ಈ ಪದ್ಧತಿಯು ಪ್ರಚಲಿತದಲ್ಲಿರುವುದನ್ನು ಕಾಣಬಹುದು.

ಮೇಳಗಳಿಂದ ಇವರಿಗೆ ಸಾಕಷ್ಟು ಸಂಪಾದನೆ ಆಗುತ್ತಿತ್ತು. ಮೇಳದಲ್ಲಿ ಆದ ಸಂಪಾದನೆಯ ಒಂದಂಶವನ್ನು ದೇವಸ್ಥಾನಕ್ಕೆ ಭಕ್ತಿ ಪೂರ್ವಕ ಒಪ್ಪಸುತ್ತಿದ್ದರು. ದಂತಕತೆಯ ಪ್ರಕಾರ ಹಿಂದೆ ಇವರು ಚಿನ್ನದ ನಾಣ್ಯವನ್ನು ಅರಸಿನ ಹಾಕಿ ಒಣಗಲು ಹಾಕುತ್ತಿದ್ದರಂತೆ. ಅಷ್ಟು ಹೇರಳ ಸಂಪತ್ತನ್ನು ಹೊಂದಿದ್ದರಂತೆ.

ಸಂಗೀತ ನೃತ್ಯಗಳಲ್ಲದೆ ದೇವದಾಸಿಯರು ನಾಟಕಗಳಲ್ಲಿಯೂ ಕಲಾವಿದರಾಗಿ ಹೆಸರುವಾಸಿಯಾಗಿದ್ದರು. ಸುಮಾರು ಎಂಬತ್ತು ವರ್ಷಗಳ ಹಿಂದೆ ಬಸ್ರೂರಿನ ದೇವದಾಸಿಯರು ಪ್ರಾರಂಭಿಸಿರುವ 'ಸ್ತ್ರೀ ನಾಟಕ ಮಂಡಳಿಯು' ತುಂಬ ಪ್ರಖ್ಯಾತಿಯನ್ನು ಪಡೆದಿತ್ತು. ಇಲ್ಲಿನ 'ರಾಹುತ ಕೇರಿಯ' ಏಳು ಜನ ಮಹಿಳೆಯರ ಈ ತಂಡಕ್ಕೆ 'ನೀಲಾಮಣಿದೇವಿ' ಅನ್ನುವವಳು ನಾಯಕಿಯಾಗಿದ್ದಳು. ನಾಟಕದಲ್ಲಿ ಪುರುಷಪಾತ್ರವನ್ನು ಸಹ ಈ ಮಹಿಳೆಯರೇ ಮಾಡುತ್ತಿದ್ದರು. ಪ್ರಹ್ಲಾದ, ಕೀಚಕ, ಕಂಸವಧೆ, ಕೃಷ್ಣಲೀಲಾ, ಚಂದ್ರಹಾಸ, ಮೊದಲಾದ ನಾಟಕಗಳನ್ನು ಪ್ರದರ್ಶಿಸುತ್ತಿದ್ದರು. ಆದರೆ ಕ್ರಮೇಣ ಮಡಿವಂತ ಸಮಾಜದ ಜನರಿಂದ ಈ ತಂಡ 'ಸೂಳೆ ಮೇಳ' ಎನ್ನುವ ಬಿರುದನ್ನು ಧರಿಸಬೇಕಾಯ್ತು. ಮಡಿವಂತ ಸಮಾಜ, ಜನ, ಕಾಲ, ಈ ತಂಡದ ಬಗ್ಗೆ ಏನೇ ಹೇಳಿದರೂ ಅವರ ಪ್ರಯೋಗಶೀಲ ದುಡಿಮೆ, ಕಲಾರಾಧನೆಯನ್ನು ಇಲ್ಲಿಯ ಜನರು ಇಂದಿಗೂ ಕೊಂಡಾಡುತ್ತಾರೆ.

ಬಸ್ರೂರಿನ ಹೆಚ್ಚಿನ ದೇವದಾಸಿ ಮನೆತನದವರು ಉತ್ತಮ ರೀತಿಯಲ್ಲೇ ಜೀವನ ಮಾಡುತ್ತಿದ್ದರು. ಅವರವರ ಯೋಗ್ಯತೆಗೆ ಸರಿಯಾಗಿ ಸಾಮಾಜಿಕ ಮನ್ನಣೆಯನ್ನು ಪಡೆಯುತ್ತಿದ್ದರು. ಇಲ್ಲಿಯ ಹಿರಿಯ ದೇವದಾಸಿ ಶ್ರೀಮತಿ ಚಂದ್ರಾವತಿ ನಾಯಕ್ ಸಾನಿ ಹಾಗೂ ಗೌರಿ ನಾಯಕ್ ಸಾನಿಯವರನ್ನು ಶಾರದ ಮಹೋತ್ಸವ ಸಮಿತಿಯು ಸನ್ಮಾನಿಸಿತ್ತು. ಈ ಕಲಾವಿದರನ್ನು ಸರಕಾರ ಗುರುತಿಸಿ ಕಲಾವಿದರ ಮಾಸಾಶನವನ್ನು ನೀಡಿ ಗೌರವಿಸಿದೆ.

### ೬.೩. ದೇವದಾಸಿ ಮತ್ತು ಊರಿನ ಜನರು

ದೇವದಾಸಿಯರು ನಿತ್ಯ ಸುಮಂಗಲೆಯರು. ಇವರು ಹಿಂದೂಗಳಲ್ಲಿ ಅತ್ಯಂತ ಘನತೆವೆತ್ತ ಮಹಿಳೆಯರೆಂದು ನಂಬಿಕೆಯಿದೆ. ಇವರ ದರ್ಶನ ಶುಭಕರವೆಂದು, ಯಾವುದೇ ಶುಭ ಕಾರ್ಯದ ನಿಮಿತ್ತ ಹೊರುಡುವಾಗ ಇವರ

ದರ್ಶನವಾದರೆ ಒಳಿತಾಗುವುದೆನ್ನುವ ಭಾವನೆ ಜನರಲ್ಲಿ ಇದೆ. ಹಿಂದೆ ಊರಿನ ಯಾವುದೇ ಮಂಗಳ ಕಾರ್ಯಗಳು ನಡೆಯಬೇಕಾದರೂ ಅದರಲ್ಲಿ ದೇವದಾಸಿಯರು ಇರಬೇಕಿತ್ತು. ವಿವಾಹ ಮೊದಲಾದ ಶುಭ ಕಾರ್ಯಗಳ ಮೆರವಣಿಗೆಗಳಲ್ಲಿ ದೇವದಾಸಿಯರು ಮುಂದುಗಡೆ ಇರುತ್ತಿದ್ದರು. ಅಪಶಕುನಗಳಾಗದಂತೆ ನೋಡಿಕೊಳ್ಳಲು ಈ ರೀತಿಯ ಪದ್ಧತಿ ರೂಢಿಯಲ್ಲಿತ್ತು. ಮದುವೆಯಲ್ಲಿ ಬಳಸುವ ಕರಿಮಣಿಯನ್ನು ದೇವದಾಸಿಯರ ಕರಿಮಣಿಗೆ ತಾಗಿಸಿ ಕಟ್ಟಿದರೆ ನಿತ್ಯ ಸುಮಂಗಲಿಯರಾಗುವರೆಂದು ಪ್ರತೀತಿ ಇದೆ. "ಹಿಂದೆ ತಮ್ಮ ಸೇವೆಯಿಂದ ನಿವೃತ್ತಿಯಾದ ದೇವದಾಸಿಯರನ್ನು ತಮಿಳುನಾಡಿನ ವೈಷ್ಣವ ದೇವಾಲಯಗಳಲ್ಲಿ 'ಕಲಿಯುಗ ಲಕ್ಷ್ಮಿ' ಎಂದೂ, ಶೈವ ದೇವಾಲಯಗಳಲ್ಲಿ 'ಕಲಿಯುಗ ಪಾರ್ವತಿ' ಎಂದು ಕರೆಯುತ್ತಿದ್ದರು." (Patil M.B, ೧೯೮೮, Page - ೪).

ದೇವರಿಗೆ ಮೀಸಲಾದ ದೇವದಾಸಿ ವಾಸ್ತವ ಜೀವನದಲ್ಲಿ ಯಾವ ಪುರುಷನ ಜೊತೆ ಬೇಕಾದರೂ ಸಂಬಂಧ ಇಟ್ಟುಕೊಳ್ಳಬಹುದು. ಆ ವಿಚಾರದಲ್ಲಿ ಆಕೆ ಸರ್ವಸ್ವತಂತ್ರಳು. ದೇವದಾಸಿಯ ಶೋಭನ ಪ್ರಸ್ಥದ ದಿನ ಊರಿನ ಗಣ್ಯ ಅಥವಾ ಶ್ರೀಮಂತ ವ್ಯಕ್ತಿಯೊಂದಿಗೆ ಪ್ರಸ್ಥದ ಏರ್ಪಾಡು ಮಾಡಲಾಗಿರುತ್ತದೆ. ಈ ವ್ಯವಸ್ಥೆಯನ್ನು ಹುಡುಗಿಯ ತಾಯಿ ಮಾಡುತ್ತಾಳೆ. ಮತ್ತು ಮಗಳನ್ನು ಉತ್ತಮ ಪುರುಷನ ಕೈಗೆ ಒಪ್ಪಿಸುವ ಬಯಕೆ ಹೊಂದಿರುತ್ತಾಳೆ. 'ಗೆಜ್ಜೆ ಕಟ್ಟಿದ' ದೇವದಾಸಿಯು ಶೋಭವ ಪ್ರಸ್ಥದ ದಿನ ಯಾರೊಂದಿಗೆ ಕೊಡುತ್ತಾಳೋ ಅವನೊಂದಿಗೆ ಜೀವನ ಪೂರ್ತಿ ನಿಷ್ಠೆಯಿಂದ ಇರುತ್ತಿದ್ದಳು.

ಸಾಮಾನ್ಯವಾಗಿ ಮದುವೆಯಾಗಿರುವ ಧನಿಕರಷ್ಟೇ ಇವರನ್ನು ಮತ್ತು ಇವರ ಸಂಸಾರವನ್ನು ಪೋಷಿಸುತ್ತಿದ್ದರು. ಇವರಿಗೆ ಆಶ್ರಯದಾತರಾಗಿದ್ದುಕೊಂಡು ಖರ್ಚುವೆಚ್ಚಗಳನ್ನೆಲ್ಲಾ ಚೆನ್ನಾಗಿ ನೋಡಿಕೊಳ್ಳುತ್ತಿದ್ದರು. ಆದರೆ ಅವರ ಆಸ್ತಿಯಲ್ಲಿ ಪಾಲು ದೊರೆಯುತ್ತಿರಲಿಲ್ಲ. ತಮಗೆ ಹುಟ್ಟಿದ ಮಕ್ಕಳನ್ನು ತಮ್ಮ ಸಂತಾನವೆಂದು ಯಾವತ್ತೂ ಪರಿಗ್ರಹಿಸುತ್ತಿರಲಿಲ್ಲ. ಆದರೂ ಕೆಲವರು ದೇವದಾಸಿಯಿಂದಾದ ತಮ್ಮ ಸಂತಾನಕ್ಕೆ ಸ್ವಂತ ಹೆಂಡತಿಯ ಮಕ್ಕಳಂತೆಯೇ ಶಿಕ್ಷಣ ಮೊದಲಾದವುಗಳನ್ನು ಕೊಡಿಸುತ್ತಿದ್ದರು. ಇಟ್ಟುಕೊಂಡವಳನ್ನು ಕೂಡಾ ಒಳ್ಳೆಯ ರೀತಿಯಲ್ಲಿ ಉಪಪತ್ನಿಯಂತೆಯೇ ಪೋಷಿಸುತ್ತಿದ್ದರು. ಇಟ್ಟುಕೊಂಡವನ ಹೆಂಡಿತಿಯು ಕೂಡಾ ದೇವದಾಸಿಯನ್ನು ತನ್ನ ಸವತಿಯಂತೆಯೇ ಪರಿಗ್ರಹಿಸುತ್ತಿದ್ದಳು. ಅವನ ಕುಟುಂಬದಲ್ಲಿಯೂ ಇದಕ್ಕೆ ಯಾವುದೇ ರೀತಿಯ ವಿರೋಧವು ಇರುತ್ತಿರಲಿಲ್ಲ. ಈ ರೀತಿಯ ವ್ಯಕ್ತಿಗಳು ಖಾಯಿಲೆ ಅಥವಾ ವೃದ್ಧ್ಯಾಪ್ಯದಲ್ಲಿದ್ದಾಗ ಸೂಳೆಯರು ಬಂದು ಸೇವೆ ಮಾಡುತ್ತಿದ್ದರು. ಅದಕ್ಕೆ ಅವರ ಹೆಂಡತಿಯರು ಕೂಡಾ 'ನಿನ್ನ ಪಾಲು ಇದೆ ಸೇವೆ ಮಾಡು' ಎಂದು ಅವಕಾಶ ಕೊಡುತ್ತಿದ್ದರು.

ಆಗಿನ ಕಾಲದಲ್ಲಿ ವೇಶ್ಯೆಯರನ್ನು ಇಟ್ಟುಕೊಳ್ಳುವುದು ಎಂದರೆ ಶ್ರೀಮಂತರಿಗೆ ಅಥವಾ ಗಣ್ಯ ವ್ಯಕ್ತಿಗಳಿಗೆ ಘನತೆಯ ಮಾತಾಗಿತ್ತು. ಇಂಥವನಿಗೆ ಬಸ್ರೂರಿನಲ್ಲಿ ಸೂಳೆ ಇದ್ದಾಳೆ ಎಂದರೆ ಅವನೋರ್ವ ದೊಡ್ಡ ವ್ಯಕ್ತಿಯೆಂದು

ಗುರುತಿಸಿಕೊಳ್ಳಲ್ಪಡುತ್ತಿದ್ದ. ದೇವದಾಸಿಯರಿಗೂ ಶ್ರೀಮಂತನೋರ್ವ ತನ್ನನ್ನು ಇಟ್ಟುಕೊಂಡಿದ್ದಾನೆಂದರೆ ಪ್ರತಿಷ್ಠೆಯ ವಿಷಯವಾಗಿತ್ತು. ಇದಕ್ಕೆ ಅಂದು ವೇಶ್ಯಾವಾಟಿಕೆಗೆ ಇದ್ದ ಸಾಮಾಜಿಕ ಮನ್ನಣೆಯೇ ಕಾರಣವಾಗಿರಬಹುದು. ಊರಿನ ಶ್ರೀಮಂತನೋರ್ವನನ್ನು ಪ್ರಶ್ನಿಸುವ ಅಧಿಕಾರ ಯಾವುದೇ ಸಾಮಾನ್ಯ ವ್ಯಕ್ತಿಗೂ ಇರುತ್ತಿರಲಿಲ್ಲ. ತನ್ನನ್ನು ಇಟ್ಟುಕೊಂಡ ವ್ಯಕ್ತಿಯೋರ್ವನಿರುವಾಗ ಆಕೆಯು ಪರಪುರುಷನ ಜೊತೆ ಸಂಬಂಧ ಪಡೆಯುತ್ತಿರಲಿಲ್ಲ. ಮತ್ತು ಆಕೆಯ ತಂಟೆಗೆ ಯಾರೂ ಹೋಗುತ್ತಿರಲಿಲ್ಲ. ಆ ವ್ಯಕ್ತಿಯ ಸಂಪರ್ಕ ನಿಂತಮೇಲೆಯೇ ಅನ್ಯ ಪುರುಷರನ್ನು ಹುಡುಕುತ್ತಿದ್ದರು. ಕೆಲವು ದೇವದಾಸಿಯರು ಇಟ್ಟುಕೊಂಡವರು ಜೀವಿತದಲ್ಲಿ ಇರುವವರೆಗೂ ಅವರ ಉಪ ಪತ್ನಿಯಂತೆ ನಿಷ್ಠೆಯಿಂದ ಇರುತ್ತಿದ್ದರು. ಒಂದು ವೇಳೆ ಅವನು ಮೃತಪಟ್ಟರೆ ಅನ್ಯ ಪುರುಷರನ್ನು ಬಯಸದೆ 'ವಿಧವಾ ಜೀವನ'ವನ್ನು ಸ್ವೀಕರಿಸುತ್ತಿದ್ದರು. ಇಂತಹ ಹಲವಾರು ನಿದರ್ಶನಗಳು ಬಸ್ರೂರಿನಲ್ಲಿ ನಡೆದಿವೆ.

ಸಾಮಾನ್ಯವಾಗಿ ಶ್ರೀಮಂತರು 'ಇಟ್ಟುಕೊಂಡವಳು' ಅಥವಾ 'ಸೂಳೆ'ಯ ಮನೆಗೆ ಬರುವಾಗ ಮುಂಚಿತವಾಗಿಯೇ ಆಳುಗಳಿಂದ ಹೇಳಿಕಳುಹಿಸುತ್ತಿದ್ದರು. ಗಣ್ಯವ್ಯಕ್ತಿಗಳು ಮನೆಗೆ ಬರುತ್ತಾರೆಂದಾಗ ಸುಂದರವಾಗಿ ಅಲಂಕರಿಸಿಕೊಂಡು ಅವರನ್ನು ಸ್ವಾಗತಿಸುತ್ತಿದ್ದರು. ಹೊರಗಿನಿಂದ ಬರುವ ವಿಟಪುರುಷರನ್ನು ಒಳಗೆ ಚಾವಡಿಯಲ್ಲಿರುವ ಜೋಕಾಲಿಯಲ್ಲಿ ಕೂರಿಸಿ ತಾಂಬೂಲ ನೀಡುತ್ತಿದ್ದರು. ಅದರಲ್ಲಿ ಎಲೆ, ಅಡಿಕೆ, ಮತ್ತು ಪರಿಮಳಯುಕ್ತವಾದ ಸುಗಂಧ ದ್ರವ್ಯಗಳನ್ನು ಹಾಕುತ್ತಿದ್ದರು. ಬಂದವನು ಆ ತಾಂಬೂಲ ತಟ್ಟೆಗೆ ಎಷ್ಟು ಹಣ ಹಾಕುತ್ತಾನೆ ಎನ್ನುವುದರಲ್ಲಿ ಅವನ ಯೋಗ್ಯತೆಯನ್ನು ಅರ್ಥಮಾಡಿಕೊಳ್ಳುತ್ತಿದ್ದರು. ಕೆಲವರು ಅವನು ಹಾಕುವ ಹಣಕ್ಕೆ ಸರಿಯಾಗಿ ಸೇವೆ ಮಾಡಿದರೆ, ಕೆಲವರು ಮನಸ್ ಪೂರ್ವಕವಾಗಿ ಸೇವೆ ಮಾಡುತ್ತಿದ್ದರು. ಮೇಲೆ ಮಹಡಿಯಲ್ಲಿ ಕೂರಿಸಿ ಅವರಿಗೆ ಹಿತವಾಗುವಷ್ಟು ಹೊತ್ತು ತಂಬೂರಿ ಹಿಡಿದು ಹಾಡು ಹೇಳುತ್ತಿದ್ದರು. ಬಳಿಕ ಅವರ ಮೈಗೆ ಎಣ್ಣೆ ಉಜ್ಜಿ, ಸ್ನಾನ ಮಾಡಿಸಿ ಕೈ ಕಾಲುಗಳನ್ನು ತಿಕ್ಕಿ ಆ ದಿನದ ಮಟ್ಟಿಗೆ ಅವನನ್ನೇ ಗಂಡ ಎನ್ನುವ 'ಅರ್ಪಣ ಭಾವದಿಂದ' ಪೂಜಿಸುತ್ತಿದ್ದರು.

ದೇವದಾಸಿಯನ್ನು ಪೋಶಿಸುತ್ತಿದ್ದ ಊರಿನ ದೊಡ್ಡ ಮನುಷ್ಯರು ಅವರ ಜೀವನ ನಿರ್ವಹಣೆಗೆ ತೊಂದರೆಯಾಗಬಾರದೆಂದು ಅವರ ಹೆಸರಲ್ಲಿ ಆಸ್ತಿ ಬರೆಸಿ ಹಾಕುತ್ತಿದ್ದರು. ಅಲ್ಲದೆ ಯುಗಾದಿ, ದೀಪಾವಳಿಗಳಂತ ಹಬ್ಬಗಳ ಸಂದರ್ಭಗಳಲ್ಲಿ ಎತ್ತಿನ ಗಾಡಿಗಳಲ್ಲಿ ಆಳುಗಳ ಮೂಲಕ ಉಡುಗೊರೆಗಳನ್ನು ಕೊಟ್ಟು ಕಳುಹಿಸುತ್ತಿದ್ದರು. ಉಡುಗೊರೆಗಳಲ್ಲಿ ಬೆಲ್ಲ, ಅಕ್ಕಿ, ಚಿನ್ನ, ಬಟ್ಟೆ, ತುಪ್ಪ, ಹಣ್ಣು, ತೈಲದ ಸೀಸೆ, ಇತ್ಯಾದಿಗಳು ಇರುತ್ತಿದ್ದವು. ಈ ರೀತಿಯ ಉಡುಗೊರೆಗಳನ್ನು ಕಳುಹಿಸುವುದೆಂದರೆ ಅದು ಶ್ರೀಮಂತರಿಗೆ 'ಘನಸ್ಥಿಕೆ'ಯ ಮಾತಾಗಿತ್ತು. ಕೆಲವೊಮ್ಮೆ ಇಟ್ಟುಕೊಂಡವರು ಕಷ್ಟದಲ್ಲಿದ್ದಾಗ ಸೂಳೆಯರು ಸಹಾಯ ಮಾಡುವುದೂ ಇದೆ. ಈ ರೀತಿಯ ಪರಂಪರಾನುಗತವಾದ ವೃತ್ತಿ ಅಂದು ನಾಡಿನ ರಸಿಕ ಜೀವನದ ಒಂದು ಕುರುಹಾಗಿತ್ತೇ ಹೊರತು ನಿಂದೆಗೆ ಗುರಿಯಾಗಿದ್ದಂತೆ ಕಾಣಿಸುವುದಿಲ್ಲ.



ಅಧ್ಯಾಯ : ೭

# ಸಾಂಸ್ಕೃತಿಕ ಸ್ಥಿತ್ಯಂತರಗಳು

೭.೧ ಬದಲಾದ ಬದುಕು ಮತ್ತು ಪರ್ಯಾಯ ಆಲೋಚನೆ

೭.೨ ಶೈಕ್ಷಣಿಕ ಸುಧಾರಣೆ

೭.೩ ಸಹ ಸಮಾಜದ ಪ್ರಭಾವ ಮತ್ತು ಪ್ರತಿರೋಧ

೭.೪ ಪ್ರಸ್ತುತ ಬದಲಾದ ಸಂದರ್ಭದಲ್ಲಿ ಕಲಾವಂತ ಸಮಾಜ

ಅಧ್ಯಾಯ : ೭

# ಸಾಂಸ್ಕೃತಿಕ ಸ್ಥಿತ್ಯಂತರಗಳು

ಸಂಸ್ಕೃತಿಯು ಕಾಲದಿಂದ ಕಾಲಕ್ಕೆ ವ್ಯತ್ಯಾಸ ಹೊಂದುತ್ತಿರುತ್ತದೆ. ಸಂಸ್ಕೃತಿಯ ಅಧ್ಯಯನವೊಂದರಲ್ಲಿ ಸಾಂಸ್ಕೃತಿಕ ವ್ಯಾತ್ಯಾಸ ಬಹುಮುಖ್ಯವಾದ ಅಂಶ. ಸಂಸ್ಕೃತಿಯು ನಿರಂತರವಾಗಿ ವ್ಯತ್ಯಾಸ ಹೊಂದುವುದರಿಂದ ಸಾಂಸ್ಕೃತಿಕ ಸ್ಥಿರತೆ ಕೇವಲ ಸಾಪೇಕ್ಷವಾದುದು. ಯಾವುದೇ ಒಂದು ವ್ಯವಸ್ಥೆಯು ಅಳಿದು ಹೋಗಲು ಅದಕ್ಕೊಂದು ಒನ್ನಲೆ ಬೇಕು. ಅದಕ್ಕೆ ಪರ್ಯಾಯವಾಗಿ ಬೇರೆ ಯಾವುದೇ ವ್ಯವಸ್ಥೆ ಆ ಸ್ಥಳವನ್ನು ಆಕ್ರಮಿಸಿದಾಗ ಮೂಲ ಸ್ವರೂಪವು ಸ್ಥಿತ್ಯಂತರಗೊಳ್ಳುತ್ತದೆ. ಅದೇ ರೀತಿ ಒಂದು ಸಂಸ್ಕೃತಿ ಇನ್ನೊಂದು ಸಂಸ್ಕೃತಿಯ ಮೇಲೆ ಪ್ರಭಾವ ಬೀರಿದಾಗ ಒಂದರಲ್ಲಿ ಇನ್ನೊಂದು ಲೀನವಾಗಿ ಹೋಗಬಹುದು. ಅಥವಾ ತನ್ನ ಸ್ವಾತಂತ್ರವನ್ನು ಕಳೆದುಕೊಳ್ಳಬಹುದು. ಇದಕ್ಕೆ ಹತ್ತಿರದಲ್ಲಿ ವಾಸಿಸುವ ಸಾಮಾಜಿಕ ವರ್ಗಗಳು ಪರಸ್ಪರ ಸಾಂಸ್ಕೃತಿಕ ಮೂಲಾಂಶಗಳನ್ನು ಸ್ವೀಕರಿಸುವುದು ಮುಖ್ಯವಾದ ಕಾರಣ.

## ೭.೧. ಬದಲಾದ ಬದುಕು ಮತ್ತು ಪರ್ಯಾಯ ಆಲೋಚನೆ

ಬಸ್ರೂರಿನ ಶ್ರೀ ಮಹಾಲಿಂಗೇಶ್ವರ ದೇವಾಲಯದಲ್ಲಿ ಹಿಂದೆ ತ್ರಿಕಾಲ ಪೂಜೆಗೂ ದೇವದಾಸಿಯರಿಂದ ನೃತ್ಯ ಸೇವೆ ನಡೆಯಬೇಕಿತ್ತು. ನಂತರದ ದಿನಗಳಲ್ಲಿ ಒಂದು ಹೊತ್ತು ಮಾತ್ರ ನೃತ್ಯ ಸೇವೆ ಮಾಡುತ್ತಿದ್ದರು. ಕೊನೆಯ ಹಂತದಲ್ಲಿ ನಿಂತಲ್ಲೇ ಕಾಲು ಆಡಿಸಿ ಹಾಡು ಹೇಳುವುದಕಷ್ಟೇ ಸೀಮಿತವಾಯಿತು. ಸುಮಾರು ೧೯೪೯-೫೦ ರ ಹೊತ್ತಿಗೆ ಈ ಪದ್ಧತಿ ದೇವಾಲಯದಿಂದ ಸಂಪೂರ್ಣವಾಗಿ ಮರೆಯಾಯಿತು. ದೇವಾಲಯದಲ್ಲಿ ಗೆಜ್ಜೆ ಕಟ್ಟುವುದನ್ನು ಕೂಡಾ ಅದಕ್ಕೂ ಕೆಲವು ವರ್ಷಗಳ ಹಿಂದೆಯೇ ನಿಲ್ಲಿಸಿದ್ದರು. ತಲ ತಲಾಂತರದಿಂದ ಪರಂಪರೆಯಾಗಿ ಬಂದಿರುವ ಒಂದು ಸಂಪ್ರದಾಯವು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳಲು ಕಾರಣವೇನು? ಎನ್ನುವುದನ್ನು ಈ ಸಂದರ್ಭದಲ್ಲಿ ತಿಳಿದುಕೊಳ್ಳಬೇಕಾಗಿದೆ.

ಹಿಂದೆ ದೇವದಾಸಿಯರ ಜನಾಂಗದಲ್ಲಿ ನೃತ್ಯಸೇವೆಯೊಂದಿಗೆ 'ವೇಶ್ಯಾವೃತ್ತಿ' ಯು ಪರಂಪರೆಯಿಂದ ಬಂದಿರುವ ಕುಲ ವೃತ್ತಿಯಾಗಿತ್ತು. ಹಳೆಯ ಕಾಲದ ರಾಜಾಶ್ರಯ, ವೀರಾಶ್ರಯ, ರಸಿಕಾಶ್ರಯಗಳಿಂದ ಪೋಷಿತವಾಗಿದ್ದ ಆ ವೃತ್ತಿ ನಾಡಿನ ರಸಿಕ ಜೀವನದ ಕುರುಹಾಗಿತ್ತೇ ಹೊರತು ನಿಂದೆಗೆ ಗುರಿಯಾಗಿದ್ದಂತೆ ಕಂಡುಬರುವುದಿಲ್ಲ. ಆದರೆ ಕಾಲ ಬದಲಾದಂತೆ ಶ್ರೀಮಂತ ರಸಿಕ ವೀರರ ಸಂಖ್ಯೆ ಕಡಿಮೆಯಾದಂತೆ ವೇಶ್ಯೆಯರ ಬೆಲೆಯೂ ಕಡಿಮೆಯಾಯಿತು. ಆ ಕಸುಬು ಘನತೆಯ ಕಸುಬಾಗುವ ಬದಲು ಅಗ್ಗದ ಕಸುಬಾದುದೇ ಅದಕ್ಕೆ ಕಾರಣ. ಅಂದಿನ ಸಮಾಜದ ಒಂದು ಅಂಗವಾಗಿಯೇ ಪರಿಗಣಿಸಲ್ಪಟ್ಟಿದ್ದ ಈ ವೃತ್ತಿಯು ನಂತರ ಬಿಡು ಕಸುಬಿನ ಜನಗಳಿಂದಾಗಿ ತನ್ನ ಹಿಂದಿನ ಗೌರವವನ್ನು ಕಳೆದುಕೊಂಡಿತು.

ಆ ದಿನಗಳಲ್ಲಿ ಈ ಸಮಾಜದ ಯಾವುದೇ ವ್ಯಕ್ತಿ ಗಂಡಾಗಲೀ, ಹೆಣ್ಣಾಗಲೀ ಮದುವೆಯಾಗುವ ಸಂಪ್ರದಾಯವಿರಲಿಲ್ಲ. ಹೆಣ್ಣು ಹುಟ್ಟಿದರೆ ಅವಳನ್ನು ದೇವರಿಗೆ ಒಪ್ಪಿಸುವುದರ ಮೂಲಕ ಸಾರ್ವಜನಿಕರ ಉಪಯೋಗಕ್ಕೆ ಬಿಡುತ್ತಿದ್ದರು. ಮದುವೆಯ ಬಗ್ಗೆ ಯಾರೂ ಆಸಕ್ತಿ ವಹಿಸುತ್ತಿರಲಿಲ್ಲ. ಹೆಂಗಸರಿಗೆ ಇದು ಒಂದು ರೀತಿಯ ಮೋಜಿನ ಜೀವನವಾಗಿತ್ತು. ಯಾರಾದರೂ ಅವರನ್ನು ಕಾಯಂ ಆಗಿ ಇಟ್ಟುಕೊಳ್ಳುತ್ತೇವೆಂದರೆ ಹಿಂದೆ ಮುಂದೆ ನೋಡದೆ ಒಪ್ಪಿಕೊಳ್ಳುತ್ತಿದ್ದರು. ಹೆಂಗಸರು ಈ ರೀತಿಯಲ್ಲಿ ಸಂಪಾದನೆ ಮಾಡಿ ಜೀವನ ನಡೆಸಿದರೆ, ಪುರುಷರು ಇನ್ನೂ ನಿಕೃಷ್ಟವಾದ ಜೀವನವನ್ನು ನಡೆಸುತ್ತಿದ್ದರು. ತಮ್ಮ ಮನೆಯ ಹೆಂಗಸರಿಗೆ ವಿಟಪುರುಷರನ್ನು ಪೂರೈಸುವಂತೆ ಪರಿಚಾರಕರ ಕೆಲಸವನ್ನು ಮಾಡುತ್ತಿದ್ದರು. ಇವರಲ್ಲಿ ಕೇಲವರು ಸೋಮಾರಿಗಳಾಗಿದ್ದು, ಗಿರಾಕಿಗಳು ಕೊಡುತ್ತಿದ್ದ ಹೆಂಡ ಮಾಂಸಗಳಿಗೆ ಬಾಯಿ ಬಿಡುತ್ತ, ವಿಷಯಲಂಪಟರಾಗಿ ಕೆಟ್ಟ ರೀತಿಯ ಜೀವನವನ್ನು ನಡೆಸುತ್ತಿದ್ದರು. ಬರಬರುತ್ತ ಈ ಸಮಾಜದ ಒಂದುರೀತಿಯ ಅನೈತಿಕತೆಯ ಜೀವನವನ್ನು ರೂಢಿಸಿಕೊಳ್ಳಲಾರಂಭಿಸಿತು. ಅಲ್ಲದೆ ಸಮಾಜವು ಇವರನ್ನು 'ಸೂಳೆಯರು' ಎನ್ನುವುದರ ಮೂಲಕ ನಿಕೃಷ್ಟವಾಗಿ ಕಾಣಲಾರಂಬಿಸಿತು. ಇವರನ್ನು ಕುಹಕ ಮಾಡುವುದಕ್ಕಾಗಿಯೇ ನಿಮ್ಮ ಜಾತಿ ಯಾವುದು, ಕುಲ ಯಾವುದು, ಎಂದು ಗೊತ್ತಿದ್ದು ವಿಚಾರಿಸಿ ನೋವು ಉಂಟುಮಾಡುತ್ತಿದ್ದರು. ಅದಕ್ಕೆ ಉತ್ತರ ಕೊಡುವುದು ಈ ಜನಾಂಗದವರಿಗೆ ಕಷ್ಟವಾದರೂ ಕೇಳುತ್ತಿದ್ದರು. ಕ್ರಮೇಣ ಸಮಾಜದಲ್ಲಿ ಹಿಂದಿನ ಗೌರವ ಕಡಿಮೆಯಾದಂತೆ ಈ ಜನಾಂಗದವರೂ ಗೌರವದ ಜೀವನದ ಅನ್ವೇಷಣೆಯಲ್ಲಿ ತೊಡಗಿದರು. ಈ ಸಂದರ್ಭದಲ್ಲಿ ಆಧುನಿಕ ಶಿಕ್ಷಣವೂ ತನ್ನ ಮಹತ್ವವನ್ನು ಪಡೆದುಕೊಂಡಿತು. ಇವರಲ್ಲಿಯ ವಿದ್ಯಾವಂತ ಯುವಕರು ಸಂಪ್ರದಾಯವಾದಿಗಳ ಹಳೆಯ ಧೋರಣೆಯನ್ನು ವಿರೋಧಿಸಲಾರಂಭಿಸಿದರು.

ತಮ್ಮ ಸಮಾಜಕ್ಕಾಗುತ್ತಿರುವ ಅವಮಾನ ಮತ್ತು ತಮ್ಮವರ ಕೆಟ್ಟ ಪ್ರವೃತ್ತಿಗಳನ್ನು ಇವರ ಸಮಾಜದ ಕೆಲವು ಹಿರಿಯರು ಪ್ರತಿಭಟಿಸಲಾರಂಭಿಸಿದರು. ಇಷ್ಟು ಹೊತ್ತಿಗಾಗಲೇ ಈ ಜನಾಂಗದವರು ಸಾಕಷ್ಟು ನೋವನ್ನು

ಅನುಭವಿಸಿರುವುದರಿಂದ ಒಂದು ವ್ಯವಸ್ಥಿತವಾದ ಬದುಕಿನ ನಿರೀಕ್ಷೆಯಲ್ಲಿದ್ದರು. ಈ ಸಂದರ್ಭದಲ್ಲಿ ಕರಾವಳಿಯಲ್ಲಿ ಕೆಲವು ಸಮುದಾಯಗಳು ಸಮಾಜ ಸುಧಾರಣೆಯಾದಂತೆ ತಮ್ಮ ಅನುವಂಶಿಕ ವೃತ್ತಿಯನ್ನು ಬಿಡಲು ಪ್ರಾರಂಭಿಸಿದರು. ಸಮಾಜ ಸುಧಾರಣೆಯ ಹೆಸರಲ್ಲಿ ಕಟ್ಟು ಪಾಡುಗಳೆಲ್ಲ ಸಡಿಲವಾಗತೊಡಗಿದವು. ದೇವಾಲಯಗಲಳು ಕೂಡಾ ಆರ್ಥಿಕವಾಗಿ ದುರ್ಬಲವಾಗುತ್ತ ತನ್ನ ಓಂದಿನ ಮಹತ್ವವನ್ನು ಕಳೆದುಕೊಂಡವು ದೇವದಾಸಿಯರಿಗೆ ದೇವಾಲಯದಿಂದ 'ಮರ್ಯಾದೆ' ಯಾಗಿ ಸ್ವಲ್ಪಮಟ್ಟಿನ ಸಂಪಾದನೆ ದೊರೆಯುತ್ತಿತ್ತು. ಇದು ಅವರ ಸಂಸಾರ ನಿರ್ವಹಣೆಗೆ ಸಾಕಾಗುತ್ತಿರಲಿಲ್ಲ. ಸಂಸಾರ ದೊಡ್ಡದಾದಂತೆ ಜೀವನ ನಿರ್ವಹಣೆ ಕಷ್ಟವಾಯಿತು. ಇದರಿಂದ ಕೆಲವು ಮನೆಗಳವರು ತೀರ ಬಡವರಾದರು.

ಈ ರೀತಿಯ ವಿಷಮ ಪರಿಸ್ಥಿಯಲ್ಲಿ ದೇವದಾಸಿ ಮನೆತನದ ಹಿರಿಯರೆಲ್ಲ ಸೇರಿ ಚಿಂತನೆ ಮಾಡಿ ತಮ್ಮ 'ಕುಲವೃತ್ತಿ' ಯನ್ನು ತ್ಯಜಿಸುವ ತೀರ್ಮಾನಕ್ಕೆ ಬಂದರು. ನಮಗೂ ಎಲ್ಲರಂತೆ ಮದುವೆ, ಸಂಸಾರ ಮೊದಲಾದ ಸಂಸ್ಕಾರಗಳು ಬೇಕು. ನಾವು ಕೂಡಾ ಎಲ್ಲರಂತೆ ಮರ್ಯಾದೆಯುತವಾದ ಜೀವನ ಮಾಡಬೇಕು. ಎಂದು ನಿಶ್ಚಯಸಿದರು. ಹಿರಿಯ ಮುಖಂಡರಾದ ವೆಂಕಟರಮಣ ನಾಯಕ್ , ಸುಬ್ರಾಯ ನಾಯಕ್ ಮೊದಲಾದವರ ಮುಖಂಡತ್ವದಲ್ಲಿ ಸಮಾಜ ಪರಿವರ್ತನೆಯ ಕಾರ್ಯ ಕೈಗೊಂಡರು. ಅದರಂತೆ ತಮ್ಮ ಸಮಾಜವನ್ನು 'ಸೂಳೆಯರು' ಎನ್ನುವುದನ್ನು ಬಿಟ್ಟು 'ಕಲಾವಂತ' ಸಮಾಜ ಎಂದು ಪರಿವರ್ತಿಸಿಕೊಂಡುರು. ಬಳಿಕ ತಮ್ಮಲ್ಲೇ ಆರ್ಥಿಕವಾಗಿ ಮುಂದುವರಿದಿರುವ 'ಸುಬ್ರಾಯ ನಾಯಕ್ ' ಎನ್ನುವವರನ್ನು ಸಮುದಾಯದ ಮುಖಂಡನನ್ನಾಗಿ ನಿಯಮಿಸಿಕೊಂಡರು. ಸುಮಾರು ೧೯೪೯ - ೫೦ರ ಹೊತ್ತಿಗೆ ಈ ತೀರ್ಮಾನವನ್ನು ಕೈಗೊಂಡರು. ತಮ್ಮ ಸಮಾಜವನ್ನು 'ಕಲಾವಂತ ಸಮಾಜ' ಎಂದು ಪರಿವರ್ತಿಸಿಕೊಂಡ ಮೇಲೆ ದೇವಾಲಯದ ನೃತ್ಯಸೇವೆ ಮತ್ತು 'ಕುಲವೃತ್ತಿ' ಯನ್ನು ನಿಲ್ಲಿಸಿ ತಮ್ಮ ಪರಿವಾರದ ಹುಡುಗಿಯರಿಗೆ ಮತ್ತು ಯುವಕರಿಗೆ ಮದುವೆ ಮಾಡಿಸುವ ಬಗ್ಗೆ ನಿರ್ಧರಿಸಿದರು. ಆದರೆ ಸಂಪ್ರದಾಯವಾದಿಗಳಾದ ಕೆಲವು ದೇವದಾಸಿಯರು ನೃತ್ಯಸೇವೆಯನ್ನು ನಿಲ್ಲಿಸುವುದಕ್ಕೆ ಸಹಮತ ತೋರಲಿಲ್ಲ. ಆಗ ಅವರಿಗೆ ನೃತ್ಯದಲ್ಲಿ ಹಿಮ್ಮೇಳ ಒದಗಿಸುತ್ತಿದ್ದ ಅವರ ಸಮಾಜದ ಗಂಡಸರು ತಮ್ಮ ಸಹಕಾರ ನಿಲ್ಲಿಸಿದರು. ಮದ್ದಲೆ ಬಾರಿಸುವ ವ್ಯಕ್ತಿಯು ಮೃತಪಟ್ಟಿದ್ದರಿಂದ ಅವನ ಉತ್ತರಾಧಿಕಾರಿಯಾಗಿ ಮುಂದೆ ಬರಲು ಯಾರು ಇಷ್ಟಪಡಲಿಲ್ಲ. ಆಗ ಅನಿವಾರ್ಯವಾಗಿ ಈ ಪದ್ಧತಿಯನ್ನು ದೇವಾಲಯದಲ್ಲಿ ನಿಲ್ಲಿಸಬೇಕಾಯಿತು.

ನೃತ್ಯಸೇವೆ ಮತ್ತು ಕುಲವೃತ್ತಿಯನ್ನು ನಿಲ್ಲಿಸಿದ ಮೇಲೆ ಮದುವೆಯ ಸಂಸ್ಕಾರವನ್ನು ಈ ಜನಾಂಗದಲ್ಲಿ ಆಚರಣೆಗೆ ತರಲಾಯಿತು. ಮೊದಲು ತಮ್ಮ ಸಮಾಜದೊಳಗಿನ ಹುಡುಗಿಯರನ್ನೇ ಮದುವೆಯಾಗುವುದರ ಮೂಲಕ ಹೊಸ ಜೀವನಕ್ಕೆ ನಾಂದಿ ಹಾಡಿದರು. ಇದೇ ಪರಿಸರದ ಹಿರಿಯ ಸಾಹಿತಿಗಳಾದ ದಿ. 'ಡಾ.ಕೆ ಶಿವರಾಮ ಕಾರಂತ' ಮತ್ತು ಕೆಲವು ಗಾಂಧೀವಾದಿಗಳು ಇವರಿಗೆ ಮದುವೆಯಾಗುವುದಕ್ಕೆ ಸಹಾಕಾರ ನೀಡುವುದರ ಮೂಲಕ ನೈತಿಕ

ಧೈರ್ಯವನ್ನು ತುಂಬಿದರು. ಸ್ವತಹ ಶಿವರಾಮ ಕಾರಂತರೇ ಮುಂದೆ ನಿಂತು ಕೆಲವು ಯುವಕರಿಗೆ ಮದುವೆ ಮಾಡಿಸಿದರು. ಏಷ್ಟೋ ಜನ ಗೆಜ್ಜೆ ಕಟ್ಟಿದ ಯುವತಿಯರು ಮದುವೆಯಾಗಿ ಬೇರೆ ಊರುಗಳಿಗೆ ಹೊರಟುಹೋದರು. ಜೀವನೋಪಾಯಕ್ಕೆ ಕೆಲವರು ಕೃಷಿ, ಹೊಲಿಗೆ, ಮೊದಲಾದವನ್ನು ಮಾಡಿದರೆ, ಕೆಲವರು ಒಂದಿನಿಂದಲೇ ಮೈಗೂಡಿಸಿಕೊಂಡು ಬಂದಿರುವ ಕಲೆಯನ್ನೇ ಆಶ್ರಯಿಸಿ ಕಲಾವಿದರಾಗಿ ಹೆಸರು ಪಡೆದರು.

ತಮ್ಮ ಸಮಾಜ ಪರಿವರ್ತನೆಯ ಈ ಕಾಲವನ್ನು 'ಪರ್ವಕಾಲ' ಎಂದು ಈ ಜನಾಂಗದವರು ಭಾವಿಸುತ್ತಾರೆ. ಇಂದಿಗೂ 'ವೆಂಕಟ ನಾಯಕ್ ', 'ಸುಬ್ರಾಯ ನಾಯಕ್ ' ರಂತಹ ಕಾರಣೀ ಪುರುಷರನ್ನು ಸ್ಮರಿಸಿಕೊಳ್ಳುತ್ತಾರೆ. ಅವರಿಂದಾಗಿಯೇ ಇಂದು ನಾವು ಸಮಾಜದಲ್ಲಿ ಗೌರವಯುತವಾದ ಜೀವನವನ್ನು ನಡೆಸುವಂತಾಯಿತು ಎಂದು ಈಗಿನವರು ಹೇಳುತ್ತಾರೆ.

## ೭.೨. ಶೈಕ್ಷಣಿಕ ಸುಧಾರಣೆ

ಬಸ್ರೂರಿನಲ್ಲಿ ದೇವದಾಸಿ ಪದ್ಧತಿಯ ಸ್ಥಿತ್ಯಂತರಕ್ಕೆ ಶಿಕ್ಷಣವೂ ಒಂದು ಪ್ರಮುಖ ಕಾರಣವಾಗಿ ಕಂಡು ಬರುತ್ತದೆ. ಶೈಕ್ಷಣಿಕವಾಗಿ ಮುಂದುವರೆದಿರುವ ಸಮಾಜದಲ್ಲಿ ಯಾವುದೇ ರೀತಿಯ ಅಜ್ಞಾನ ಮತ್ತು ಮೂಢನಂಬಿಕೆಗಳಿಗೆ ಅವಕಾಶ ಇರುವುದಿಲ್ಲ. ಅವಿದ್ಯಾವಂತನಾದವನು ಯಾವಾಗಲೂ ಗೊಡ್ಡು ಸಂಪ್ರದಾಯಗಳಿಗೆ ಜೋತು ಬಿದ್ದಿರುತ್ತಾನೆ. ಮನುಷ್ಯ ಜೀವನದ ಪ್ರತೀ ಹಂತದಲ್ಲಿಯೂ ಮಾನವೀಯತೆಯನ್ನು ಮಾನವೀಕರಣಗೊಳಿಸುವಲ್ಲಿ ಶಿಕ್ಷಣ ಅತೀ ಅವಶ್ಯಕವಾಗಿದೆ. ಶಿಕ್ಷಣವು ಮನುಷ್ಯನನ್ನು ಅಸತ್ಯದಿಂದ ಸತ್ಯದತ್ತ. ಅಜ್ಞಾನದಿಂದ ಸುಜ್ಞಾನದತ್ತ ಕೊಂಡೊಯ್ಯುತ್ತದೆ. ಶಿಕ್ಷಣದಿಂದ ಮನುಷ್ಯನ ಮನಸ್ಸು ವಿಶಾಲವಾಗುತ್ತದೆ. ಯಾವುದೇ ಕಾರ್ಯ ಮಾಡಬೇಕಾದರೂ ವಿದ್ಯಾವಂತನಾದವನು ಯೋಚನೆ ಮಾಡುತ್ತಾನೆ.

ಬಸ್ರೂರಿನಲ್ಲಿ ಆಧುನಿಕ ಶಿಕ್ಷಣ ಪ್ರಾರಂಭವಾಗುವುದಕ್ಕೆ ಮೊದಲು ಐಗಳ ಮಠದಲ್ಲಿ ಪ್ರಾಥಮಿಕ ಶಿಕ್ಷಣ ದೊರೆಯುತ್ತಿತ್ತು. ಅದರ ಸ್ಮಾರಕವಾಗಿ ಇಂದಿಗೂ ಮಹಾಲಿಂಗೇಶ್ವರ ದೇವಸ್ಥಾನದ ಸಮೀಪ 'ಐಗಳ ಹಿತ್ಲು' ಎಂಬುದೊಂದು ಉಳಿದಿದೆ. ನಂತರ ಕ್ರೈಸ್ತಧರ್ಮದ ಬಾಸೆಲ್ ಮಿಷನ್ ನವರು ೧೮೪೨ರಲ್ಲಿ ಪ್ರಥಮ ಶಾಲೆಯನ್ನು ಆರಂಭಿಸುವುದರೊಂದಿಗೆ ಈ ಪರಿಸರದ ಮಕ್ಕಳಿಗೆ ಶಿಕ್ಷಣಾವಕಾಶವನ್ನು ಒದಗಿಸಿಕೊಟ್ಟರು. ಇಲ್ಲಿ ಆರಂಭದ ವರ್ಷಗಳಲ್ಲಿ ಒಂದರಿಂದ ಐದನೆಯ ತರಗತಿಯವರೆಗೆ ಪ್ರಾಥಮಿಕ ಶಿಕ್ಷಣ ಕಲಿಕೆಗೆ ಅವಕಾಶ ಮಾಡಿಕೊಡಲಾಗಿತ್ತು. ಅಂದು ಆರ್ಥಿಕವಾಗಿ ಅನುಕೂಲವಾಗಿದ್ದವರು ಮಾತ್ರ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದರು.

ಬಸ್ರೂರಿನಲ್ಲಿ ಆಧುನಿಕ ಶಿಕ್ಷಣ ಆರಂಭವಾದಾಗ ದೇವದಾಸಿ ಸಮಾಜದವರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಆರಂಭಿಸಿದರು. ಈ ಜನಾಂಗ ಹಿಂದಿನಿಂದಲೂ ನೃತ್ಯ ಸಂಗೀತಾದಿಗಳಿಗೇ ಮೀಸಲಾಗಿದ್ದುದರಿಂದ ಶಿಕ್ಷಣವೂ ಅನಿವಾರ್ಯವಾಗಿ ಬೇಕಾಗಿತ್ತು. ಇವರು ಯಾವಾಗ ತಮ್ಮ ಮಕ್ಕಳನ್ನು ಶಾಲೆಗೆ ನೊಂದಾಯಿಸಲು ಆರಂಬಿಸಿದರೋ ಆಗಲೇ ಸಮಸ್ಯೆಯನ್ನು ಎದುರಿಸಬೇಕಾಯಿತು. ಯಾಕೆಂದರೆ ಮಗುವನ್ನು ಶಾಲೆಯಲ್ಲಿ ನೊಂದಾಯಿಸುವಾಗ ಜಾತಿ ಮತ್ತು ತಂದೆಯ ಹೆಸರನ್ನು ಅಗತ್ಯವಾಗಿ ಸೂಚಿಸಬೇಕಾಗುತ್ತಿತ್ತು. ಅನಧಿಕೃತ ತಂದೆಯ ಹೆಸರನ್ನು ಸೂಚಿಸುವುದು ಈ ಸಮಾಜದ ಹೆಂಗಸರಿಗೆ ತುಂಬ ಮುಜುಗರ ತರಿಸುತ್ತಿತ್ತು.

ಶಿಕ್ಷಣ ಪಡೆದ ಈ ಸಮಾಜದ ಹುಡುಗಿಯರು ತಮ್ಮ ಕುಲವೃತ್ತಿಯನ್ನು ಮುಂದುವರಿಸಲು ಇಷ್ಟಪಡುತ್ತಿರಲಿಲ್ಲ. ಎಷ್ಟೋಸಲ ಮುಂದುವರಿಸಿದರೂ ಅದು ಒತ್ತಾಯದ ಹೇರಿಕೆಯಾಗಿತ್ತೇ ಹೊರತು ಒಪ್ಪಿಗೆಯಿಂದಲ್ಲ. ಈ ಸಂದರ್ಭದಲ್ಲಿ ಸಾಂಪ್ರದಾಯಿಕ 'ಗ್ರಹಸ್ಥ ಜೀವನ' ಪದ್ಧತಿ ಇವರಲ್ಲಿ ಪ್ರಚಲಿತದಲ್ಲಿ ಇಲ್ಲದೆ ಇದ್ದುದರಿಂದ ಕೆಲವೊಮ್ಮೆ ಅನಿವಾರ್ಯವಾಗಿ 'ಕುಲವೃತ್ತಿ' ಯನ್ನು ಒಪ್ಪಿಕೊಳ್ಳಬೇಕಾಗುತ್ತಿತ್ತು. ಈ ಜನಾಂಗದ ವಿದ್ಯಾವಂತ ಯುವಕರು ತಮ್ಮ ಕುಲದ ವೃತ್ತಿಯನ್ನು ವಿರೋದಿಸುತ್ತಿದ್ದರು. ಎಷ್ಟೋ ಜನ ವಿದ್ಯಾವಂತರು ಉದ್ಯೋಗವನ್ನರಿಸಿ ಬೇರೆ ಊರುಗಳಿಗೆ ಹೊರಟುಹೋದರು. ಜೊತೆಯಲ್ಲಿ ತಮ್ಮ ಪರಿವಾರದವರನ್ನು ಕರೆದುಕೊಂಡು ಹೋದರು. ಇದರಿಂದ ಈ ಪದ್ಧತಿಗೆ ದೊರೆಯಬೇಕಾಗಿದ್ದ ಬೆಂಬಲ ಕಡಿಮೆಯಾಯಿತು. ಇವರ ಮುಂದಿನ ಪೀಳಿಗೆಯು ಈ ಪದ್ಧತಿಯನ್ನು ಸ್ವಾಗತಿಸಲಿಲ್ಲ.

## ೭.೩. ಸಹಸಮಾಜದ ಪ್ರಭಾವ ಮತ್ತು ಪ್ರತಿರೋಧ

ದೇವದಾಸಿಯರು ದೇವಾಲಯದಲ್ಲಿ ತಮ್ಮ ನೃತ್ಯಸೇವೆಯನ್ನು ನಿಲ್ಲಿಸಿದಾಗಲೇ ನಾನಾ ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಮಾನಸಿಕವಾಗಿ ದೃತಿಗೆಡುವಂತಹ ಹಲವಾರು ಸಂದರ್ಭಗಳು ಎದುರಾದವು. ಸಹ ಸಮಾಜದ ಪ್ರಭಾವೀ ವ್ಯಕ್ತಿಗಳು 'ಕುಲವೃತ್ತಿ'ಯನ್ನು ಮುಂದುವರೆಸುವಂತೆ ಒತ್ತಡ ಹೇರಲಾರಂಭಿಸಿದರು. ಕೆಲವರು ಇದು ಅಸಹ್ಯ ವೃತ್ತಿ. ಇದು ಊರಿಗೇ ಒಂದು ಕಳಂಕ. ಇದರಿಂದ ಎಷ್ಟೋ ಜನ ಯುವಕರು ಕೆಟ್ಟ ದಾರಿ ಹಿಡಿಯುವಂತಾಯಿತು. ಇನ್ನು ಮುಂದೆ ಈ ಪ್ರವೃತ್ತಿಯನ್ನು ಮುಂದು ವರಿಸಿಕೂಡದೆಂದು ಹಿತನುಡಿ ಹೇಳಿದರು.

ಕಾಕತಾಳೀಯವೋ ಎನ್ನುವಂತೆ ದೇವದಾಸಿಯರು ನೃತ್ಯಸೇವೆಯನ್ನು ನಿಲ್ಲಿಸಿದಾಗ ಇವರ ಕುಟುಂಬಗಳಲ್ಲಿ ಹಲವಾರು ತೊಂದರೆಗಳು ತಲೆದೋರಿದವು. ಮದುವೆಯಾದ ಕೆಲವು ಮನೆಗಳಲ್ಲಿ ಒಂದೋ ಗಂಡು ಸಾಯುವುದು, ಇಲ್ಲವೇ ಹೆಣ್ಣು ಸಾಯುವುದು. ಮೊದಲಾದವುಗಳು ನಡೆಯಲಾರಂಭಿಸಿದವು. ಎಷ್ಟೋ ಜನ ಈ ಸಮುದಾಯದವರಿಗೆ ಹುಚ್ಚು ಹಿಡಿಯಿತು. ಕೆಲವರು ಕಾಯಿಲೆಗಳಿಂದ ಸತ್ತುಹೋದರು. ಆಗ ಅವರೆಲ್ಲ ದೇವರು ಮುನಿದನೆಂದುಕೊಂಡು

'ಇನ್ನು ನಾವೆಲ್ಲ ಸರ್ವನಾಶ ಖಂಡಿತ' ಎಂದು ಭಾವಿಸಿದರು. ಆದರೂ ಏನೇ ತೊಂದರೆಗಳು ಬಂದರೂ ಇವರು ತಮ್ಮ ತೀರ್ಮಾನ ಬದಲಾಯಿಸಲಿಲ್ಲ. ಎಲ್ಲವನ್ನು ಎದುರಿಸಿಲು ಸಿದ್ಧ ಎಂದು ಧೃಡ ನಿಶ್ಚಯ ಮಾಡಿಕೊಂಡರು.

ಆ ಸಂದರ್ಭದಲ್ಲಿ ಊರಿನಲ್ಲಿ ಕೋಲಾಹಲವೇ ನಡೆಯಿತು. ಕೆಲವು ಸಮಯ ಸಾಧಕರು ಇವರನ್ನು ಹೆದರಿಸಲಾರಂಭಿಸಿದರು. ನೀವೆಲ್ಲರೂ ನಾಶವಾಗುತ್ತೀರಿ, ನಿಮ್ಮ ವೃತ್ತಿಯನ್ನು ನಿಲ್ಲಿಸಬೇಡಿ, ಕುಲವೃತ್ತಿಯನ್ನು ಮುಂದುವರಿಸಿ, ಎಂದೆಲ್ಲ ಗದರಿಸಲಾರಂಭಿಸಿದರು. ಅಂದು ಜಮೀನ್ದಾರಿ ಪದ್ಧತಿ ಪ್ರಚಲಿತದಲ್ಲಿದ್ದುದರಿಂದ ಜನಸಾಮಾನ್ಯರ ಶೋಷಣೆ ಸಾಮಾನ್ಯವಾಗಿತ್ತು. ಆದರೂ ಕುಟುಂಬದ ಹಿರಿಯರು ಯಾವುದೇ ರೀತಿಯ ಬೆದರಿಕೆಗಳಿಗೆ ಜಗ್ಗದೆ ತಮ್ಮ ನಿರ್ಧಾರ ಬದಲಾಯಿಸಲಿಲ್ಲ. ನಾವು ಇಂದು ತೊಂದರೆ ಅನುಭವಿಸಿದರೂ ನಮ್ಮ ಮುಂದಿನ ಜನಾಂಗ ನೆಮ್ಮದಿಯಿಂದಿರಬಹುದು ಎಂದು ಭಾವಿಸಿ ತಮ್ಮ ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿಕೊಂಡರು. ತಮ್ಮ ಮಕ್ಕಳಿಗೆಲ್ಲ ಉತ್ತಮ ವಿದ್ಯಾಭ್ಯಾಸ ಕೊಡಿಸುತ್ತ ಮದುವೆ ಮೊದಲಾದ ಸಂಸ್ಕಾರಗಳನ್ನು ಮುಂದುವರಿಸಿದರು.

ಸಾಮಾನ್ಯವಾಗಿ ಎಲ್ಲ ಕುಟುಂಬಗಳವರು ಈ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದರೆ ಮದುವೆಯಾದ ಕೆಲವು ಯುವತಿಯರು ಬೇರೆಯದೇ ಆದ ಸಮಸ್ಯೆಯನ್ನು ಎದುರಿಸಬೇಕಾಯಿತು. ಊರಿನ ಶ್ರೀಮಂತ ಯುವಕರು ಇವರ ಹೆಣ್ಣುಗಳು ಮದುವೆಯಾಗುವುದನ್ನು ವಿರೋದಿಸುತ್ತಿದ್ದರು. ಮಾನಸಿಕವಾಗಿ ಅವರನ್ನು ದುರ್ಬಲರಾಗುವಂತೆ ಮಾಡುತ್ತಿದ್ದರು. ಮದುವೆಯಾದ ಸುಂದರ ಹೆಣ್ಣುಗಳನ್ನು ಊರಿನಲ್ಲಿ ನೆಮ್ಮದಿಯಿಂದ ಜೀವಿಸಲು ಬಿಡಲಿಲ್ಲ. ಕೆಲವರು ಮದುವೆಯಾಗಿ ಊರು ಬಿಟ್ಟು ಹೋದರೂ ಅವರ ಕಿರುಕುಳ ನಿಲ್ಲಲಿಲ್ಲ. ರಾತ್ರಿ ಬಂದು ಮನೆಗೆ ಕಲ್ಲು ತೂರುವುದು, ಭೂತ ಛೇಷ್ಮೆ ಮಾಡಿ ಹೆದರಿಸುವುದು ಇತ್ಯಾದಿ ಮಾಡುತ್ತಿದ್ದರು. ಕೆಲವೊಮ್ಮೆ ಮದುವೆಯಾದವರೂ ಆ ಜೀವನದಲ್ಲಿ ಮುಂದುವರಿಯಲಾಗದೆ ಪುನ: ಅನಿವಾರ್ಯವಾಗಿ ತಮ್ಮ ಕುಲವೃತ್ತಿಯನ್ನೇ ಮುಂದುವರಿಸುವಷ್ಟು ಉಪಟಳ ಕೊಟ್ಟರು. ಮದುವೆಯಾಗುತ್ತೇವೆಂದು ಬಂದ ಹೊರಗಿನ ಯುವಕರಿಗೆ ಊರಿನವರು ಅವಕಾಶ ಕೊಡುತ್ತಿರಲಿಲ್ಲ. ಎಷ್ಟೋ ಸಲ ಮದುವೆಯ ಸಂಬಂಧಗಳನ್ನು ತಪ್ಪಿಸುತ್ತಿದ್ದರು.

ಈ ರೀತಿಯ ಬೆದರಿಕೆಗಳಿಗೆ ಜಗ್ಗದೆ ಈ ಜನಾಂಗ ತನ್ನ ನಿರ್ಧಾರವನ್ನು ಬದಲಾಯಿಸಲಿಲ್ಲ. ಪರಿಣಾಮವಾಗಿ ಇಂದು ಇವರು ನೆಮ್ಮದಿಯ ಉಸಿರು ಬಿಡುವಂತಾಗಿದೆ.

### ೭.೪. ಪ್ರಸ್ತುತ ಬದಲಾದ ಸಂದರ್ಭದಲ್ಲಿ ಕಲಾವಂತ ಸಮಾಜ

ಇಂದು ದೇವದಾಸಿ ಸಮಾಜದವರು ವ್ಯವಸ್ಥಿತವಾದ ಸಾಮಾಜಿಕ ಬದುಕನ್ನು ರೂಪಿಸಿಕೊಂಡಿದ್ದಾರೆ. ತಮಗೆ ನಿರ್ದಿಷ್ಟವಾದ ಜಾತಿ ಇಲ್ಲದೇ ಇರುವುದರಿಂದ ಸಾಮಾಜಿಕ ಭದ್ರತೆಯ ದೃಷ್ಟಿಯಿಂದ ಕಲಾವಂತ ಸಮಾಜವೆಂದು

ನಿರ್ಮಿಸಿಕೊಂಡಿದ್ದಾರೆ. ತಮ್ಮ ಹಳೆಯದೆಲ್ಲವನ್ನು ಮರೆತು ಇಂದಿನ ಸಮಾಜದ ಮುಖ್ಯವಾಹಿನಿಯಲ್ಲಿ ಸೇರಿಕೊಂಡಿದ್ದಾರೆ. ದೇವದಾಸಿಯರ ಮಕ್ಕಳು ಮದುವೆಯಾಗಿ ಗೃಹಸ್ಥ ಜೀವನವನ್ನು ನಡೆಸುತ್ತಿದ್ದಾರೆ. ಸಮಾಜದ ಇತರ ಜಾತಿಯವರೊಂದಿಗೆ ಮದುವೆ ಸಂಬಂಧಗಳು ಏರ್ಪಟ್ಟು ಆಯಾ ಸಮುದಾಯದ ಸದಸ್ಯರಾಗಿ ಪರಿವರ್ತನೆ ಹೊಂದುತ್ತಿದ್ದಾರೆ.

ಇಂದಿನ ವಿದ್ಯಾವಂತ ಯುವ ಪೀಳಿಗೆಯವರಿಗೆ ತಮ್ಮ ಸಮಾಜದ ಹಿಂದಿನ ನಡವಳಿಕೆ ಮತ್ತು ಪರಂಪರೆಯ ಬಗ್ಗೆ ತುಂಬಾ ನೋವಿದೆ. ತಾವು 'ಸೂಳೇರ ಸಮಾಜದವರು' ಎಂದು ಹೇಳಿಸಿಕೊಳ್ಳುವುದಕ್ಕೆ ಯಾರೂ ಇಷ್ಟಪಡುವುದಿಲ್ಲ. ಈ ಸಮಾಜದ ಎಷ್ಟೋ ಜನ ವಿದ್ಯಾವಂತ ಯುವಕರು ಬೇರೆ ಊರುಗಳಲ್ಲಿ ಮದುವೆಯಾಗಿ ತಮ್ಮ ಸಂಸಾರಗಳೊಂದಿಗೆ ನೆಲೆಸಿದ್ದಾರೆ. ಅವರು ತಮ್ಮ ಹುಟ್ಟೂರಿಗೆ ಬರಲು ಇಷ್ಟಪಡುವುದಿಲ್ಲ. ತಮ್ಮ ಹಿರಿಯರು ಈ ರೀತಿಯ ಪರಂಪರೆಯವರು ಎಂದು ತಮ್ಮ ಹೆಂಡತಿ ಮಕ್ಕಳಿಗೆ ಹೇಳಿ ಕೊಳ್ಳುವುದಕ್ಕೆ ಸಂಕೋಚ ಪಟ್ಟುಕೊಳ್ಳುತ್ತಾರೆ. ಇಲ್ಲಿನ ದೇವಾಲಯದಲ್ಲಿ ಗೆಜ್ಜೆ ಕಟ್ಟಿದವರಲ್ಲಿ ಕೆಲವರು ಮದುವೆಯಾಗಿ ಮಕ್ಕಳೊಂದಿಗೆ ಬೇರೆ ಊರುಗಳಲ್ಲಿದ್ದು ಹುಟ್ಟೂರಿಗೆ ಬರಲು ಇಷ್ಟಪಡುವುದಿಲ್ಲ.

ಈ ಸಂಪ್ರದಾಯದ ಬಗ್ಗೆ ಮಾಹಿತಿ ನೀಡುವುದಕ್ಕೆ ಕಲಾವಂತ ಸಮಾಜದವರು ತುಂಬ ವಿರೋಧ ವ್ಯಕ್ತ ಪಡಿಸುತ್ತಾರೆ. ತಮ್ಮ ಬಗ್ಗೆ ನಡೆಯುವ ಯಾವುದೇ ರೀತಿಯ ಸಂಶೋಧನೆ ಅಥವಾ ಪ್ರಚಾರವನ್ನು ಅವರು ಬಯಸುವುದಿಲ್ಲ. ಇಂತಹ ಹಲವಾರು ವಿಷಯಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಕ್ಕೆ ಬಂದವು. "ಅದೆಲ್ಲ ಮುಗಿದು ಹೋದ ಕಥೆ. ನೀವು ಅದನ್ನು ಮತ್ತೆ ಮತ್ತೆ ಕೆದಕಿ ನಮ್ಮ ಮನಸ್ಸಿಗೆ ನೋವುಂಟುಮಾಡಬೇಡಿ. ಹಿಂದೆ ನಮ್ಮಲ್ಲಿ ಆ ರೀತಿಯ ಪದ್ಧತಿ ಇದ್ದರೆ ಅದಕ್ಕೆ ನಾವು ಜವಾಬ್ದಾರಲಲ್ಲ. ಯಾಕೆಂದರೆ ಎಲ್ಲ ಕುಲವೃತ್ತಿಗಳಂತೆ ಈ ವೃತ್ತಿಯೂ ನಮ್ಮ ಹಿರಿಯರಿಂದ ಪರಂಪರೆಯಾಗಿ ಬಂದಿರುವುದು. ಇದು ಎಲ್ಲರಿಗೂ ಗೊತ್ತಿರುವ ವಿಷಯವೇ. ಅದರಲ್ಲಿ ಯಾವುದೇ ಮುಚ್ಚು ಮರೆ ಇಲ್ಲ. ನಮ್ಮವರು ಈಶ್ವರನನ್ನು ಮದುವೆಯಾದವರು. ಅದೇ ದೃಷ್ಟಿಯಿಂದ ಇತರರನ್ನು ಸೇವಿಸುತ್ತಿದ್ದವರು. ಇಂದಿನವರೆಗೆ ಅದು ಅನೈತಿಕವಾಗಿ ಕಂಡುಬಂದುರೂ ಹಿಂದೆ ಅದು ಅನೈತಿಕ ಜೀವನವಾಗಿರಲಿಲ್ಲ. ಅದು ಸಮಾಜ ಒಪ್ಪಿಕೊಂಡು ಬಂದ ಪದ್ಧತಿಯಾಗಿತ್ತು" ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಇಂದು ಈ ಸಮಾಜದವರು 'ಪ್ರತಿಭಾವಂತ'ರೆಂದು ಎಲ್ಲ ರಂಗಗಳಲ್ಲಿಯೂ ಗುರುತಿಸಲ್ಪಟ್ಟಿದ್ದಾರೆ. ಇವರಲ್ಲಿ ಹೆಚ್ಚಿನವರು ವಿದ್ಯಾವಂತರು, ಕುಶಲ ಕರ್ಮಿಗಳು, ಮತ್ತು ಉತ್ತಮ ಕಲಾವಿದರಾಗಿ ಹೆಸರು ಪಡೆದಿದ್ದಾರೆ. ಕಲೆಯ ದೃಷ್ಟಿಯಿಂದ ಸಮಾಜಕ್ಕೆ ಇವರ ಕೊಡುಗೆ ಅಪಾರವಾದುದು. ಕಲಾಭಿರುಚಿ ಎನ್ನುವುದು ಇವರಲ್ಲಿ ವಂಶವಾಹಿನಿಯಾಗಿ

ಬಂದಿದೆ. ನಾಟಕ, ರಂಗಾಭಿನಯದಲ್ಲಿ ಇವರದು ಎತ್ತಿದ ಕೈ. ೧೯೩೦ರಿಂದಲೇ ರಂಗದ ಗೀಳು ಹಿಡಿದು ರಂಗು ತೊಡಗಿಸಿಕೊಂಡ ದಿ. 'ಆನಂದ್ ಬಸ್ರೂರ್ ', 'ರೂಪರಂಗ'ದ ಮೂಲಕ ನಾಡಿನ ಉದ್ದಗಲಗಳಲ್ಲಿ ಮನೆ ಮಾತಾಗಿ ಮೆರೆದವರು. ಸಂಗೀತ, ನಟನೆ, ತಬ್ಲಾಗಳಲ್ಲಿ ನುರಿತ ಇವರು ಡಾ.ಕಾರಂತರ ಚಿತ್ರದಲ್ಲೂ ನಟಿಸಿದ್ದಾರೆ. ಇವರನ್ನು ಉತ್ತಮ ಕಲಾವಿದರೆಂದು ಗುರುತಿಸಿ ಸರಕಾರವು 'ರಾಜ್ಯ ಪ್ರಶಸ್ತಿ' ನೀಡಿ ಪುರಸ್ಕರಿಸಿದೆ.

ಇವರಲ್ಲಿ ಸ್ವತ: ನಾಟಕ ರಚನೆ, ನಟನೆ ಮತ್ತು ದಿಗ್ದರ್ಶನ ಮಾಡಿ ಹೆಸರು ಪಡೆದವರಿದ್ದಾರೆ. ಮುಂಬೈ ಆಕಾಶವಾಣಿಯಲ್ಲಿ ಕಲಾವಿದರಾಗಿ, ಸಂಗೀತ ವಾದಕರಾಗಿ ಸೇವೆ ಮಾಡಿದವರಿದ್ದಾರೆ. ಸಂಗೀತ ಶಿಕ್ಷಕರಾಗಿ ಅಪ್ರತಿಮ ತಬಲಾವಾದಕರಾಗಿಯೂ ಹೆಸರು ಪಡೆದವರಿದ್ದಾರೆ. (ಕಲಾವಿದರ ಹೆಸರು ಮತ್ತು ಪರಿಚಯವನ್ನು ಅನುಬಂಧದಲ್ಲಿ ನೀಡಲಾಗಿದೆ)

ಪ್ರಸ್ತುತ ಬಸ್ರೂರಿನಲ್ಲಿ ಕಲಾವಂತರ ಸುಮಾರು ೨೦ರಿಂದ ೨೫ ಮನೆಗಳಿದ್ದು ಇವರೆಲ್ಲ ಇತರ ವೃತ್ತಿಯನ್ನು ಅವಲಂಬಿಸಿಕೊಂಡಿದ್ದಾರೆ. ಇವರ ಕುಟುಂಬಿಕರು ಮುಂಬೈ, ಬೆಂಗಳೂರು, ಶಿವಮೊಗ್ಗ ಮೊದಲಾದೆಡೆಗಳಲ್ಲಿ ನೆಲೆಸಿದ್ದಾರೆ. ಈಗ 'ಸುಧಾಕರ ನಾಯಕ್ ' ಅನ್ನುವವರು ಬಸ್ರೂರಿನ ಕಲಾವಂತ ಸಮಾಜಕ್ಕೆ ಮುಖಂಡರಾಗಿದ್ದಾರೆ. ಮೊದಲೇ ತಿಳಿಸಿರುವಂತೆ ಮೂಲತ: ಇವರು ತುಂಬ ಬುದ್ಧಿವಂತರು ಇವರು ಯಾವುದೇ ರಂಗದಲ್ಲಿ ಪ್ರವೇಶಿಸಿದರೂ ಕೂಡಲೇ ಅದರಲ್ಲಿ ಹೆಸರು ಪಡೆಯುತ್ತಾರೆ. ಈಗ ಕೃಷಿ, ವ್ಯಾಪಾರ, ಸಣ್ಣಪುಟ್ಟ ಗೃಹ ಕೈಗಾರಿಕೆ ಮೊದಲಾದವನ್ನು ನಡೆಸುತ್ತಿದ್ದಾರೆ. ಇವರೆಲ್ಲರಿಗೂ ತಮ್ಮ ಜನಾಂಗದ ಅಭಿವೃದ್ಧಿಯ ಬಗ್ಗೆ ತುಂಬ ಹೆಮ್ಮೆ ಇದೆ. ಸರಕಾರ ಇತರ ಹಿಂದುಳಿದ ಜನಾಂಗದವರಿಗೆಲ್ಲ ಅಭಿವೃದ್ದಿಯ ನೆಪದಲ್ಲಿ ಪ್ರೋತ್ಸಾಹ ನೀಡುತ್ತದೆ. ಅವರಿಗೆ ಮೀಸಲಾತಿಯಂತಹ ಏನೇನೋ ಸವಲತ್ತುಗಳನ್ನು ಕೊಟ್ಟು ಮೇಲೆ ತರಲು ಪ್ರಯತ್ನಿಸುತ್ತಿದೆ. ಆದರೆ ನಾವು ಯಾರ ಸಹಕಾರವೂ ಇಲ್ಲದೆ ಅಭಿವೃದ್ದಿ ಹೊಂದುತ್ತಾ ಇದ್ದೇವೆ. ಇದು ನಮಗೆಲ್ಲ ಸಂತೋಷದ ವಿಷಯವೆಂದು ತಮ್ಮವರ ಬಗ್ಗೆ ಹೆಮ್ಮೆಯಿಂದ ಹೇಳುತ್ತಾರೆ.

ಅಭಿವೃದ್ದಿಯ ದೃಷ್ಟಿಯಿಂದ ಸರಕಾರ ಇವರನ್ನು ಕಡೆಗಣಿಸಿದ್ದು ತುಂಬ ದುರದೃಷ್ಟಕರ ಸಂಗತಿ. ಈ ಜನಾಂಗಕ್ಕೆ ವಿಶೇಷ ಪ್ರಾತಿನಿಧ್ಯವನ್ನು ನೀಡಬೇಕಾಗಿತ್ತು.



ಅಧ್ಯಾಯ : ೮

# ಸಮಾರೋಪ

ಇದುವರೆಗೆ ಇಲ್ಲಿ ನಡೆಸಿದ 'ಬಸ್ರೂರಿನ ದೇವದಾಸಿ ಪದ್ಧತಿ'ಯ ಅಧ್ಯಯನದಿಂದ ಕೆಳಗಿನ ಅಂಶಗಳು ವ್ಯಕ್ತವಾಗುತ್ತವೆ.

ಒಟ್ಟಾರೆ ಸಂಸ್ಕೃತಿಯಲ್ಲಿ ದೇವದಾಸಿ ಸಂಪ್ರದಾಯವು ಶುದ್ಧ ಧಾರ್ಮಿಕ ಹಿನ್ನೆಲೆಯಲ್ಲಿ ಉಗಮಗೊಂಡಿದ್ದರೂ, ನಂತರ ಅದು ಕೆಲವು ಪ್ರಭಾವೀ ವ್ಯಕ್ತಿಗಳಿಂದಾಗಿ ತನ್ನ ಮಹತ್ವ ಕಳೆದುಕೊಂಡಿತು.

ಕರಾವಳಿ ಪ್ರದೇಶದಲ್ಲಿ ದೇವದಾಸಿ ಪದ್ಧತಿಯು ಜಾತ್ಯಾತೀತವಾದುದು. ಇದು ಕುಲಕಸುಬಾದರಿತ ವೃತ್ತಿಯಾಗಿತ್ತು.

ಸ್ಥಳೀಯ ಸಂಸ್ಕೃತಿಯಲ್ಲಿ ರಾಜ ಮಹಾರಾಜರ ವಿಷಾರಾಮದ ಜೀವನದ ಕುರುಹಾಗಿ ಈ ಪದ್ಧತಿಯು ಪ್ರಚಲಿತಕ್ಕೆ ಬಂದಿದ್ದರೂ ಮುಂದೆ ಅವರ ಅವನತಿಯೊಂದಿಗೆ ಈ ಪದ್ಧತಿಯೂ ತನ್ನ ಪ್ರಾಬಲ್ಯವನ್ನು ಕಳೆದುಕೊಂಡಿತು.

ಹಳೆಯ ಕಾಲದ ರಾಜಾಶ್ರಯ, ವೀರಾಶ್ರಯ, ರಸಿಕಾಶ್ರಯಗಳಿಂದ ಪೋಷಿಸಲ್ಪಡುತ್ತಿದ್ದ ಈ ವೃತ್ತಿಯು ನಾಡಿನ ರಸಿಕ ಜೀವನದ ಒಂದು ಕುರುಹಾಗಿತ್ತೇ ಹೊರತು ನಿಂದೆಗೆ ಗುರಿಯಾಗಿದ್ದಂತೆ ಕಾಣಿಸುವುದಿಲ್ಲ. ಕಾಲಗತಿ ಕೆಡುತ್ತ ಸರಿದಂತೆ ಶ್ರೀಮಂತ ರಸಿಕ ವೀರರ ಸಂಖ್ಯೆ ಕಡಿಮೆಯಾದಂತೆ, ನೃತ್ಯ ಗೀತಾದಿಗಳಿಗೆ ಬೆಲೆ ಕಡಿಮೆಯಾದಂತೆ ದೇವದಾಸಿಯರ ಬೆಲೆಯೂ ಕಡಿಮೆಯಾಯಿತು. ಆ ಕಸುಬು ಘನತೆಯ ಕಸುಬಾಗುವ ಬದಲು ಅಗ್ಗದ ಕಸುಬಾದುದೇ ಅದಕ್ಕೆ ಕಾರಣ.

ಗೆಜ್ಜೆ ಕಟ್ಟಿದ ದೇವದಾಸಿಯರನ್ನು ಇಟ್ಟುಕೊಂಡು ವ್ಯಕ್ತಿಯು ಅವಳನ್ನು ದೈಹಿಕ ಮೋಹದಿಂದ ನೋಡುತ್ತಿದ್ದನೇ ಹೊರತು ತನ್ನ ಕುಟುಂಬದೊಂದಿಗೆ ಎಂದಿಗೂ ಸೇರಿಸಿಕೊಳ್ಳುತ್ತಿರಲಿಲ್ಲ. ಅವಳ ದೇಹ ಸೌಂದರ್ಯ ಮಾಸಿದಂತೆ ತಿಪ್ಪೆಗೆಸೆದ ಕಸದಂತೆ ಅನಾಥೆಯಾಗುತ್ತಿದ್ದಳು. ಆದರೆ ಮದುವೆಯಾದ ಹೆಣ್ಣೊಬ್ಬಳ ಗಂಡನಾದವನು

ಜೀವನದ ಕೊನೆಯವರೆಗೂ ಅವಳ ಕಷ್ಟಸುಖದಲ್ಲಿ ಭಾಗಿಯಾಗಿರುತ್ತಾನೆ. ಅವಳು ನನ್ನವಳೆಂದು ಮನಸ್ ಪೂರ್ವಕವಾಗಿ ಒಪ್ಪಿಕೊಳ್ಳುತ್ತಾನೆ.

ದೇವದಾಸಿಯರ ಕುಟುಂಬದಲ್ಲಿ ಗಂಡುಮಕ್ಕಳು ತಮ್ಮ ಮನೆಯ ಹೆಣ್ಣುಗಳಿಗೆ ಹೊರಗಿನಿಂದ ವಿಟಪುರುಷರನ್ನು ಪೂರೈಕೆ ಮಾಡುವ ಕಾರ್ಯ ಮಾಡತ್ತಿದ್ದರು. ಇದು ಯಾವ ಸಂಸ್ಕೃತಿಯೂ ಒಪ್ಪಿಕೊಳ್ಳದಂತ ಶೋಚನೀಯ ಪದ್ಧತಿ.

ಆರ್ಥಿಕ ಹಾಗೂ ಅಧಿಕಾರ ಬಲಗಳು ಪುರುಷರ ವಶದಲ್ಲಿ ಇರುವಂತಹ ಎಲ್ಲ ಸಂಸ್ಕೃತಿಗಳಲ್ಲಿಯೂ ಹೆಣ್ಣನ್ನು ಪುರುಷನ ಆಸ್ತಿಯಂತೆ ಭಾವಿಸಲಾಗಿದೆ. ಈ ಅಂಶ ಆಯಾ ಸಾಂಸ್ಕೃತಿಕ ಪರಿಸರದಲ್ಲಿ ಬೇರೆ ಬೇರೆಯಾಗಿ ಅಭಿವ್ಯಕ್ತವಾಗಿದೆ. ಈ ಮನೋಧರ್ಮದಿಂದಾಗಿ ಹೆಣ್ಣನ್ನು ಬೇಕೆಂದ ಹಾಗೆ ಬಳಸಬಹುದು. ಬೇಕಾದವರಿಗೆ ಕೊಡಬಹುದು, ಬೇಡವೆಂದರೆ ಬಿಡಬಹುದು.

ಇಂದು ಈ ಜನಾಂಗದವರು ತಮ್ಮ ಕುಲವೃತ್ತಿಯನ್ನು ಸಂಪೂರ್ಣವಾಗಿ ನಿಲ್ಲಿಸಿದ್ದರೂ, ವೇಶ್ಯಾವೃತ್ತಿಯು ಸಮಾಜದಿಂದ ನಿರ್ಮೂಲನೆಯಾಗಿಲ್ಲ. ಅಂದು ಸಮಾಜದಲ್ಲಿ ನೈತಿಕವೆಂದು ಪರಿಗಣಿಸಲ್ಪಟ್ಟಿದ್ದ ಈ ವೃತ್ತಿಯು ಇಂದು ಅನೈತಿಕವೆಂದು ಪರಿಗಣಿಸಲಾಗಿದೆ.

ಸಂಗೀತ, ನೃತ್ಯ, ರಂಗಭೂಮಿ, ಹಾಗೂ ಇತರ ಕಲೆಗಳು ಮುಂದೆ ಶಿಷ್ಟ ಸಂಪ್ರದಾಯದ ಕಲೆಗಳಾಗಿ ರೂಪುಗೊಂಡಾಗ ಅವುಗಳಿಗೆ ಒಂದು ಮಾದರಿಯನ್ನು, ಮೂಲಭೂತವಾದ ಒಂದು ಆಕಾರವನ್ನು ಕೊಟ್ಟದ್ದು ಈ ದೇವದಾಸಿ ಸಮಾಜವೇ ಎಂಬುದನ್ನು ಗಮನಿಸಬೇಕು. ಇವರಿಂದ ಬೆಳೆದು, ಪೋಷಿಸಿಕೊಂಡು ಬಂದಿರುವ ನೃತ್ಯ, ಸಂಗೀತ, ನಾಟಕಾದಿ ಲಲಿತ ಕಲೆಗಳು ಇಂದು ಎಲ್ಲರ ಸೊತ್ತಾಗಿ ಸಾಮಾಜಿಕ ಮಾನ್ಯತೆ ಪಡೆದುಕೊಂಡಿವೆ.

ದೇವದಾಸಿಯರು ಅನುಸರಿಸುತ್ತಿದ್ದ 'ಗೆಜ್ಜೆಪೂಜೆ' ಸಂಪ್ರಕಾಯವು ಇತರ ಕೆಲವು ಕಲೆಗಳಲ್ಲಿ ಈಗಲೂ ಮುಂದುವರಿದುಕೊಂಡು ಬಂದಿದೆ. ಭರತನಾಟ್ಯ, ಯಕ್ಷಗಾನಗಳಲ್ಲಿ ರಂಗ ಪ್ರವೇಶದಂದು 'ಗೆಜ್ಜೆಪೂಜೆ' ಯಾಗಬೇಕಿದೆ.

ಎಲ್ಲ ಕಾಲದಲ್ಲಿಯೂ ಸಮಾಜ ಸಂಪ್ರದಾಯದ ನಿಯಮದಂತೆ ಸಾಗುವುದಿಲ್ಲ. ನಿಯಮಗಳ ಉಲ್ಲಂಘನೆ, ಹೊಸತರ ಆಕರ್ಷಣೆಯು ಎಲ್ಲ ಕಾಲದಲ್ಲಿಯೂ ಸಮಾಜದಲ್ಲಿ ನಡೆಯುತ್ತಲೇ ಇರುತ್ತದೆ.

ಒಟ್ಟಿನಲ್ಲಿ ವಸಾಹತು ಪೂರ್ವದ ಮತ್ತು ಅನಂತರದ ಕರ್ನಾಟಕದ ಸಮಾಜವೊಂದರ ರೀತಿ ನೀತಿಗಳನ್ನು 'ದೇವದಾಸಿ'ಯರ ಸಮಾಜದ ಅಧ್ಯಯನದ ಮೂಲಕ ತಿಳಿದುಕೊಳ್ಳಲು ಸಾಧ್ಯವೆಂದು ನಾನು ಭಾವಿಸುತ್ತೇನೆ.



# ಅನುಬಂಧ

೧. ದೇವದಾಸಿಯರ ಹಾಡುಗಳು

೨. ಕಲೆ ಮತ್ತು ಕಲಾವಿದರು

೩. ವಕ್ತೃಮಾಹಿತಿ

೪. ಗ್ರಂಥಋಣ

೫. ನಕ್ಷೆ

೬. ಛಾಯಾಚಿತ್ರಗಳು

ಅನುಬಂಧ : ೧

# ದೇವದಾಸಿಯರ ಹಾಡುಗಳು

೧

## ತಟ್ಟೆ ಚಾಕರಿ ಹಾಡು

(ರಾಗ : ಕಾಂಬೋಡಿ, ತಾಳ: ಝಂಪೆ)

ಶೃಂಗಾರವಾದ ಬಾಲೆಯರೊ[1] ಮಹಾ

ಲಿಂಗಗೆ ಮಗಂಳಾರತಿಯೆತ್ತಿರೆ || ಪ ||

ಮುತ್ತಿನಾಭರಣವ ನಿತ್ಯ ಮುಡಿಯಕಟ್ಟಿ

ಭಕ್ತಿಯಿಂದಲಿ ತಾರೊ ಬಂದೊ[2]

ಚಿತ್ತಜ ಪಿತರಾಜ ದೇವ ಮಹಾಲಿಂಗಗೆ

ಅರ್ತಿಯಿಂದಲಿ ಆರತಿಯೆತ್ತಿರೆ || ೧ || ಶೃಂಗಾರ .....

ನಾಗಭೂಷಣಗೆ ನಾರಾಯಣ

ನಾಗಚರ್ಮಾಂಬರಧರಗೆ

ನಾಗವೈರಿಯ ವಾಹನ ನಾಗಶ್ರೀ ಕನ್ನೆಗೆ

ನಾಗ ಕನ್ನಿಕೆಯರು ಆರತಿಯೆತ್ತಿರೆ || ೨ || ಶೃಂಗಾರ .....

ಗಂಗಾಧರಗೆ ಗೌರಿಯ ಮನೋಹರಗೆ

ತುಂಗಭದ್ರೆಯ ಸಹ ನುಡಿ ವಾಣಿಗೆ

ಹಿಂಗದೆ ವಸುಪುರದೊಳು ನೆಲಸಿದ ಶ್ರೀ ಮಹಾ

ಲಿಂಗಗೆ ಮಂಗಳಾರತಿಯೆತ್ತಿರೆ || ೩ || ಶೃಂಗಾರ .....

---

೧. ಬಾಲೆಯರು

೨. ಯೆಂದೊ

೨

## ನವರಾತ್ರಿಯಲ್ಲಿ ಮತ್ತು ದೇವಿ ದೇವಸ್ಥಾನದಲ್ಲಿ ಹೇಳುವ ಹಾಡು

(ರಾಗ : ಕಾಂಬೋಡಿ, ತಾಳ : ತ್ರಿಪುಡೆ)

ಸಲಹೆನ್ನ ತಾಯೆ ರುದ್ರಾಣಿ | ಜಗದ್ಗುರು ನಾಗಾಭರಣನ ರಾಣಿ ||

|| ಪ || ಸಲಹೆನ್ನ

ಶರಣು ಬಂದೆನು ನಿನ್ನ | ಕರುಣದಿ ಸಲಹೆನ್ನ |
ಪರಮಪಾವನೆ ಗೌರಿ | ದುರಿತ ಸಂಹಾರಿ || ೧ || ಸಲಹೆನ್ನ

ಶಕ್ತಿ ಸ್ವರೂಪಿಣಿ ನೀನು | ನಿನ್ನ
ಭಕ್ತಿಯಿಂ ಭಜಿಸುವೆ ನಾನು
ಯುಕ್ತದಿ ರಕ್ಷಿಸು | ಮುಕ್ತಿಯ ಕರುಣಿಸು
ಭಕ್ತೋದ್ಧಾರಿ ತ್ರೈಲೋಕವುದ್ಧಾರಿಣಿ || ೨ || ಸಲಹೆನ್ನ

ಶರ್ವಾನರ್ಧಾಂಗಿ ಪಾರ್ವತಿ | ನೀನೆ
ಸರ್ವದಾನವರ ಮರ್ಧಿಸಿ
ಪರ್ವತವಾಸಿನಿ | ಸರ್ವಾಘನಾಸಿನಿ
ಸರ್ವಜಗನ್ಮಾಯೆ ಕಾಯೊ ಮಹಾಮಾಯೆ || ೩ || ಸಲಹೆನ್ನ

ಚಂಡ ಮುಂಡಾದಿ ದೈತ್ಯರನು | ಶಿರವ
ಖಂಡಿಸಿ ರಕ್ತ ಬೀಜರನು
ತುಂಡಿಸಿ ಖಂಡಿಸಿ | ಶೋಣಿತ ಪರಿಯೂಳಿಪ್ಪ
ಚಂಡಿ ಮಹಾಂಕಾಳಿ ನಂಬಿದೆ ನಿನ್ನನ್ನು || ೪ || ಸಲಹೆನ್ನ

ಸೃಷ್ಟಿಯೊಳಧಿಕವಾಗಿರುವ | ಶ್ರೀ
ವಸುಪುರದಲಿ ನೀ ಮೆರೆವ
ಗಟ್ಟಿ ಬೆಟ್ಟಗಳಲಿ | ತೊಟ್ಟನುದ್ಭವಿಸಿ ವಿಶೇಷ ಭಕ್ತರಿಗೆ
ಕಷ್ಟ ಪರಿಹರಿಪಳೆ ನಂಬಿದೆ || ೫ || ಸಲಹೆನ್ನ

೩

## ವಾಹನ ಉತ್ಸವದಲ್ಲಿ ಹೇಳುವ ಹಾಡು

(ರಾಗ : ಜಂಜೂಟಿ, ತಾಳ : ಚಾಪು)

ಕರುಣದಿ ನೋಡೊ ಸದಾಶಿವ |
ಕರುಣದಿ ನೋಡೊ ಶಂಭೋಶಿವ || ಪ ||

ಕರುಣದಿ ನೋಡೊ ನಿನ್ನ | ಚರಣವ ನಂಬಿದೆ |
ಮರಳಿ ಮರಳಿ ನಾನು | ಯೋನಿಯೊಳ್ ಬರಲಾರೆ || ೧ || ಕರುಣದಿ .....

ಮನುಜ ಜನ್ಮದಿ ಪುಟ್ಟಿ | ವನಿತೆ ಮಕ್ಕಳ ನೆಚ್ಚಿ |
ಘನ ಮೋಹ ತಾರೆಂದು | ಮನವು ಪೊಯ್ಯುತಲಿದೆ || ೨ || ಕರುಣದಿ .....

ಮೂರು ಜನ್ಮಗಳಿಂದ | ತೋರಿತು ಕತ್ತಲೆ |
ಅರಣ್ಯದೊಳಗೆನ್ನ | ದಾರಿ ತಪ್ಪಿಸಬೇಡ || ೩ || ಕರುಣದಿ .....

ಮಡದಿ ಮಕ್ಕಳು ಯೆಂಬ | ಸಡಗರದಿಂದಲ್ಲಿ |
ಮಡಿದು ಹೋಗುವಾಗ | ಒಡನೆ ಬರುವರಿಲ್ಲ || ೪ || ಕರುಣದಿ .....

ಬಲೆಯೊಳು ಸಿಲುಕಿದ ಮೊಲ ಬಾಯಿ ಬಿಡುವಂತೆ
ಹಲವು ಕರ್ಮಕೆ ಬಿದ್ದು | ತೊಳಗೊಳಗಾದೆನು || ೫ || ಕರುಣದಿ .....

೪

## ಬಲಿಯಾಗುವಾಗ ಸುತ್ತಿನಲ್ಲಿ ಹೇಳುವ ಹಾಡು

(ರಾಗ : ಕಲ್ಯಾಣಿ, ತಾಳ: ಝಂಪೆ)

ಯಾಕೆ ದಯವನ್ನು ಮಾಡೆ ಓ ಸಾಂಬಶಿವನೆ

ಲೋಕ ರಕ್ಷಕನೆಂಬ ಬಿರುದು ಪೊಗಳಿಸಿಕೊಂಡೆ || ಪ ||

ವಾಸವೆ ಕೈಲಾಸ | ವಸನವೆ ಗಜಚರ್ಮ

ವಾಸುದೇವನ ಮಿತ್ರ | ವಸುಧೆ ಗಿರಿಜೇಶ

ವಾಸುಕಿಯು ಆಭರಣ | ವಸುಧೆ ಯುಂಟೆಂಬರ ತಾ

ಈಸೊ ಗರ್ವದೊಳೆನ್ನ | ಮರೆತೆಯೋ ಮಹಾದೇವ || ೧ || ಯಾಕೆ .....

ಸಾರಥಿಯು ಬ್ರಹ್ಮ | ಮೇರುವೆಯು ಧನು ಅದಕೆ

ನಾರಾಯಣನೆ ಅಸ್ತ್ರ | ನಾಗೇಂದ್ರ ಸೂತ್ರ

ಈ ರೀತಿಯಲಿ ಮೂರು | ಪುರವ ಜಯಿಸಿದೆನೆಂಬ

ಅಹಂ ಕಾರದಿಂದೆನ್ನ | ಮರೆತೆಯೋ ಮಹಾದೇವ || ೨ || ಯಾಕೆ .....

ಬಡವರೊಳಗ್ಯಾಕೆನಿತು | ಚೆಲುವ ತೋರಿದೆ ಶಿವನೆ

ಬಿಡದೆನ್ನ ಕಾಯೊ ಮನ | ದಿಷ್ಟಾರ್ಥವೀಯೊ

ಮೃಢನು ನೀನಲ್ಲದಿನ್ನಾ | ರುಂಟು ಈ ಜಗಕೆ

ವಸುಪುರದಿ ನೆಲೆವಾಸ | ಶ್ರೀ ಮಹಾಲಿಂಗೇಶ || ೩ || ಯಾಕೆ .....

೫

## ಬೀದಿಯಲ್ಲಿ ಹೇಳುವ ಹಾಡು

[ರಾಗ : ಕೇದಾರ (ಚಾಲು), ತಾಳ: ಏಕ]

ಈ ಹರೆಯಲಿ ಲಿಂಗೇಂದ್ರನ ರತಿ ಸುಖ ಹಾ

ಇಂಥಾ ಸೊಗಸು ನೀರೆ | ಸೊಗಸು ನೀರೆ || ಪ ||

ಮುತ್ತುಗಳಿಲ್ಲವು ಜಾತಿ ಇಲ್ಲವೊ ಜಾತಿ
ಮುತ್ತಿನಂತೆ ಕೇಳ್ ಸುಪ್ರೀತಿ
ಸುತ್ತ ಮುತ್ತಲಿಗೆ ವಿಖ್ಯಾತೆ | ಬಹುನೀತಿ || ಹಾ ಇಂಥಾ || || ೧ ||

ಸುಮ್ಮನೆ ಮೆಚ್ಚುವವನಲ್ಲ | ಮೆಚ್ಚುವವನಲ್ಲ
ಒಮ್ಮೆ ಬಂದರವ ಬಿಡುವನಲ್ಲ
ಜುಮ್ಮೆನಿಸುವ ಕಲೆ ನೆಲೆಯೆಲ್ಲ ಬಲ್ಲೆನಲ್ಲಾ || ಆಹಾ ಇಂಥಾ || || ೨ ||

ಗಾಡಾಲಿಂಗನ ಗಡಲೆ | ಲಿಂಗನಗಡಲೆ
ಕೂಡುವೆ ತರತರ ವೇನಿನಲಿ
ಪ್ರೌಢೆಗೆ ಸಮನಿಲ್ಲವೊ ನಯದಲಿ | ಮೋಹದಲಿ || ಆಹಾ ಇಂಥಾ || || ೩ ||

ಮನ್ಮಥನೇ ಗ್ರಹಕಾಣೆ | ವಿಗ್ರಹ ಕಾಣೆ |
ವಿನಯಸ್ಮಿತ ಸರಸದೊಳು ವಾಣಿ
ಅನುದಿನ ನೆನೆಸಿ ನೀವು | ಸ್ವರವಾಣಿ | ಸ್ವರವಾಣಿ || ಆಹಾ ಇಂಥಾ || || ೪ ||

ಕ್ಷೀರ ಪುರಿವರ ನೊಲಿದು | ಇವರ ನೊಲಿದು
ವೀರಭದ್ರ ದಯದಿಂದೊಲಿದು
ಧೀರಲಿಂಗ ನೃಪಮನ ನೆನೆದು | ರಮಿಸುವದೊ || ಆಹಾ ಇಂಥಾ || || ೫ ||

೬

## ಬೀದಿಯಲ್ಲಿ ಹೋಗುವಾಗ ಹೇಳುವ ಹಾಡು

[ರಾಗ : ಕಾಂಬೋಜಿ, ತಾಳ: ಏಕ]

ನೂರಾರ ಕಲಿತವಳಲ್ಲ | ನುಡಿಯೊಂದ ನಾನರುಹುವೆನಲ್ಲ |
ಜಾರರೊಡನೆ ಮಾತಾಡಿದಳಲ್ಲ ನೀ ವಿ |
ಚಾರಿಸಿ ನೋಡೆನ್ನ ದೊರೆಯೇ ||
ಶ್ರೀ ರಾಜಾಧಿ ರಾಜ | ಸಾಹಿತ್ಯ ಭೋಜಾ | ಧೀರಾಕೇಲಿಂಗರಾಜ || ಪ ||

ಭಾವನರಿತು ನಡೆವವ ಪ್ರೇಮಿ
ಆಪತ್ಕಾಲದಿ ಕೈ ಹಿಡಿದವನೆ ಕುಲಸ್ವಾಮಿ
ಸಂದೇಹವ್ಯಾಕೆ | ಸುಪ್ರಭವ | ಸಂಜೀವ | ಶಿವಶಿವ
ನಾನೇ ಸಂಪ್ರೀತಿಯಿಂದ ಮನಸೋತೆ ಪರೀಕ್ಷಿಸು
ಭೂಪತಿ ನಾ ಶುದ್ಧ ಗರತಿ | || ಶ್ರೀ ರಾಜಾಧಿ .....

ಜಾತಿರತುನವ ಬಿಟ್ಟು ಶೀಲೆಯ ಕಾಮಿಸುವದು
ಕೌತುಕವಾಯ್ತು ಪ್ರಾಣ ಧರೆಯ |
ಇನ್ನೆಷ್ಟು ಪೇಳ್ವೆ ಸುಪ್ರಭವ | ಶಿವಶಿವ | ಸಂಜೀವ
ಸತಿ ಸಂಪ್ರೀತಿಯಿಂದ ಮನಸೋತೆ ಪರೀಕ್ಷಿಸು
ಭೂಪತಿ ನಾ ಶುದ್ಧ ಗರತಿ | || ಶ್ರೀ ರಾಜಾಧಿ .....

ಭೂಮಿಯೊಳ್ ಧೀರ ನಾಗ ಕೇಶ ಲಿಂಗೇಂದ್ರ ರತಿಸುಖ
ನಾಮ ಸಂಕೀರ್ತನಾಭಿತೋಷ |
ಸಾಮ್ರಾಜ್ಯ ಕೌಶಲದಿ | ರಾಮಾ | ರಿಪುಭೀಮಾ | ರತಿಕಾಮ
ಸತಿ ಸಂಗ್ರಾಮವೆರಸು ಮತ್ತಾನೀಕ ಸುರತದೊ
ಳಾಡಿಸು ಬಹು ಸೌಖ್ಯ ಪಡಿಸೋ | || ಶ್ರೀ ರಾಜಾಧಿ ರಾಜಾ .....

## ಪಕ್ಷಿ ಜಾಗರಣೆ ಹಾಡು

(ರಾಗ : ಪಂತುರ ವಾಳಿ, ತಾಳ: ಚಾಪು)

ಇತ್ತ ಬಾರೈ ಸತ್ಯವಂತನೆ
ಇತ್ತ ಬಾರೈ | ನಿತ್ಯ ದೂರನೆ
ಇತ್ತ ಬಾರೈ | ಭಕ್ತ ವತ್ಸಲ
ಸತ್ಯ ಭಾಮೆಯರರಸನೆ || ಪ ||

ಕಾಲಲಂದುಗೆ ಗೆಜ್ಜೆ ಪಿಲ್ಲಿಯು
ಮೇಲು ಮುಕುಟದ ನಡುವಿನೊಡ್ಯಾಣ
ತೋಳಬಾಪುರಿ ಮೆರೆವ ಕುಂಡಲ
ನಿಲ ಮುಕುಟದ ಚೆಲುವನೇ || ೧ || ಇತ್ತ ಬಾರೈ .....

ಶೇಷ ಶಯನನೇ | ದೋಷಮಾರನೆ
ಈ ಸಮಸ್ತ | ಜನರ ಪೊರೆವನೆ
ಶೇಷಶೋಭೆಯೊಳ್ | ಮೆರೆವ
ಈಶ ಸರ್ವೇಶ | ದಯ ಮುಖವೆ || ೨ || ಇತ್ತ ಬಾರೈ .....

ಧರೆಗಧಿಕ ಹನು | ಮಾದ್ರಿ ವಾಸನೆ
ಧರಿಸಿ ಮುದ್ದು | ವೆಂಕಟೇಶನೆ
ಪುರ ಸಮಸ್ತ | ಜನರ ಪೊರೆವನೆ
ಗರುಡ ದೇವರ | ದೇವನೆ | || ೩ || ಇತ್ತ ಬಾರೈ .....

೮

## ಮಂಗಳ ಹಾಡು

(ರಾಗ : ಸುರುಟೆ, ತಾಳ: ಚಾಪು)

ಮಂಗಳಂ ಮಂಗಳಂ | ಮಹಾಲಿಂಗಗೆ ಮಂಗಳಂ

ಅಜಸುರ ವಂದ್ಯಗೆ | ಭುಜಗ ರಮಣನಿಗೆ
ವಿಜಯ ವಸ್ತ್ರವ ನಿತ್ತ ಮಾರ್ಜಟಿಗೆ |
ಕುಜನರ ಶಿಕ್ಷಿಪ | ಸುಜನ ರಕ್ಷಕಗೆ || ಮಂಗಳಂ ಮಂಗಳಂ || ||೧||

ನಂದಿವಾರೂಢಗೆ | ಕಂದರ್ ಪಂಚಕನಿಗೆ
ಸುಂದರ ಕಾಮಗೆ ಶ್ರೀ ಕಂಠಗೆ |
ಕಂದನ ಪೆತ್ತಗೆ | ಚಂದ್ರಶೇಖರನಿಗೆ
ಸಿಂಧು ಗಂಭೀರ ಗೋ ವಿಂದ ಸಖಗೆ | || ಮಂಗಳಂ ಮಂಗಳಂ || ||೨||

ಕರಿಮುಖ ತಾತಗೆ | ಗಿರಿಜಾ ರಮಣಗೆ
ಕರುಣಾಕರನಿಗೆ ಪರಮೇಶಿಗೆ |
ಧರಣಿಗುತ್ತಮವಾದ | ವರವಸುಪುರದಲ್ಲಿ
ಸ್ಥಿರವಾಗಿ ನೆಲಸಿದ ಲಿಂಗೇಶನಿಗೆ | || ಮಂಗಳಂ ಮಂಗಳಂ || ||೩||

ಮೇಲಿನ ಎಲ್ಲ ಹಾಡುಗಳನ್ನು *ಪ್ರೊ. ಕನರಾಡಿ ವಾದಿರಾಜ ಭಟ್ಟರ* 'ದೇವದಾಸಿಯರ ಹಾಡುಗಳು' ಸಂಗ್ರಹದಿಂದ ಆಯ್ದುಕೊಳ್ಳಲಾಗಿದೆ.



ಅನುಬಂಧ : ೨

# ಕಲೆ ಮತ್ತು ಕಲಾವಿದರ ಪರಿಚಯ

೧. ಶ್ರೀ ಬಸ್ರೂರು ಸಂಜೀವರಾಯರು ಸುಮಾರು ೧೯೪೦ರ ಸಮಯದಲ್ಲಿ ರಂಗಭೂಮಿಯ ನಟ ಮತ್ತು ನಿರ್ದೇಶಕರಾಗಿ ದುಡಿದಿದ್ದರು.

೨. ಶ್ರೀ ಬಸ್ರೂರು ನಾರಾಯಣ ರಾವ್ ಅವರು ಸಂಗೀತ ಶಿಕ್ಷಕರಾಗಿದ್ದು 'ತಬಲಾ'ದಲ್ಲಿ ಅಪ್ರತಿಮ ಕೈಚಳಕವುಳ್ಳವರಾಗಿ ವೃತ್ತಿಪರ ರಂಗಭೂಮಿಯಲ್ಲೂ ಸೇವೆ ಸಲ್ಲಿಸಿದ್ದರು.

೩. ಶ್ರೀ ರಾಮಚಂದ್ರರಾವ್ 'ತರುಣ ನಾಟ್ಯ ಕಲಾ ಪ್ರೇಮಿ ಮಂಡಳಿ' ಬಸ್ರೂರು ಇಲ್ಲಿ ೧೯೪೮ರಲ್ಲಿಯೇ ಸ್ತ್ರೀ ಪಾತ್ರಧಾರಿಯಾಗಿದ್ದರು.

೪. ಬಸ್ರೂರಿನ ಶ್ರೀ ಮಹಾಬಲರಾವ್ ಎನ್ನುವವರು ನಟರಾಗಿಯೂ, ಶ್ರೀ ಮಹಾಲಿಂಗರಾವ್ ಎನ್ನುವವರು ಹಾರ್ಮೋನಿಯಂ ಕಲಾವಿದರಾಗಿಯೂ, ಶ್ರೀಮತಿ ಸುಶೀಲಾ ಬಸ್ರೂರು ಇವರು ಪ್ರಧಾನ ನಟಿಯಾಗಿಯೂ ಮೊದಲು 'ಅಂಬಾ ಪ್ರಸಾದಿತ ನಾಟಕ ಕಂಪನಿ'ಯಲ್ಲಿಯೂ ನಂತರ ಫೀರ್ ಸಾಬರ ಕಂಪನಿಯಲ್ಲಿಯೂ ಅವಿಶ್ರಾಂತವಾಗಿ ದುಡಿದಿದ್ದಾರೆ.

೫. ಶ್ರೀ ಎಸ್.ಎನ್. ಬಸ್ರೂರು (ಬಸ್ರೂರು ಸಂಜೀವ ನಾಯಕ್) ಎನ್ನುವ ತರುಣರೊಬ್ಬರು ತನ್ನ ೧೮ನೇ ವಯಸ್ಸಿನಲ್ಲಿಯೇ ಸಾಮಾಜಿಕ ನಾಟಕವೊಂದನ್ನು ಬರೆದು ಸ್ವತಃ ನಟಿಸಿ, ದಿಗ್ದರ್ಶನ ಮಾಡಿ ಬಸ್ರೂರಿನಲ್ಲಿ ಪ್ರದರ್ಶನ ನೀಡಿದ್ದಾರೆ. 'ಕಲಾ ಕೂಟ'ದ ಸ್ಥಾಪಕರಲ್ಲಿ ಇವರೂ ಒಬ್ಬರು.

೬. ಶ್ರೀ ದುಗ್ಗಪ್ಪ ಬಸ್ರೂರು (ನೀಲಮಣಿಯ ಪುತ್ರ) ಇವರು ತಬಲಾ ಮತ್ತು ಹಾರ್ಮೋನಿಯಂ ಎರಡರಲ್ಲಿಯೂ ಪರಿಣತಿ ಹೊಂದಿದವರು ಮತ್ತು 'ಅಂಬಾ ಪ್ರಸಾದಿತ ನಾಟಕ ಕಂಪನಿ'ಯಲ್ಲಿ ಹಾಗೂ ಫೀರ್ ಸಾಹೇಬರ ಕಂಪನಿಯಲ್ಲಿಯೂ ದುಡಿದಿದ್ದಾರೆ.

೭. ಶ್ರೀ ಆನಂದ ಬಸ್ರೂರು ಇವರು ರೂಪರಂಗದ ಮೂಲಕ ನಾಡಿನ ಉದ್ದಗಲಗಳಲ್ಲಿ ಮನೆಮಾತಾಗಿದ್ದು, ಸಂಗೀತ, ನಟನೆ, ತಬಲಾಗಳಲ್ಲಿ ನುರಿತ ಕಲಾವಿದರಾಗಿದ್ದರು. ಡಾ. ಕಾರಂತರ ಚಲನ ಚಿತ್ರದಲ್ಲಿ ನಟಿಸಿದ್ದರು.

೮. ಶ್ರೀ ಬಾಬಿ ಮನೆ ಕೇಶವ ಇವರು ಮುಂಬೈ ಆಕಾಶವಾಣಿಯಲ್ಲಿ ವಾಯೊಲಿನ್ ಮತ್ತು ಜಲತರಂಗ ವಾದಕರಾಗಿ ಸೇವೆಗೈದಿದ್ದಾರೆ.



ಅನುಬಂಧ : ೩

# ವಕ್ತೃ ಮಾಹಿತಿ

೧. ಶ್ರೀ ಪ್ರೊ. ಕನರಾಡಿ ವಾದಿರಾಜ ಭಟ್ಟ
ಪ್ರಾಧ್ಯಾಪಕರು
ಶ್ರೀ ಶಾರದಾ ಕಾಲೇಜು
ಬಸ್ರೂರು
ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ

೨. ಶ್ರೀ ಅಪ್ಪಣ್ಣ ಹೆಗ್ಡೆ (೬೫ ವರ್ಷ)
ಮಾಜಿ ಶಾಸಕರು ಮತ್ತು ಆಡಳಿತ ಮೊಕ್ತೇಸರರು
ಶ್ರೀ ಮಹಾಲಿಂಗೇಶ್ವರ ದೇವಸ್ಥಾನ
ಬಸ್ರೂರು
ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ

೩. ಶ್ರೀ ಲಕ್ಷ್ಮೀ ನಾರಾಯಣ ಮಧ್ಯಸ್ಥ (೮೦ ವರ್ಷ) ಜ್ಯೋತಿಷಿ
ನಿವೃತ್ತ ಪ್ರಾಧ್ಯಾಪಕರು
ಬಸ್ರೂರು
ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ

೪. ಶ್ರೀ ಸಖಾರಾಮ್ ರಾವ್ (೭೧ ವರ್ಷ)
ನಿವೃತ್ತ ಪ್ರಾಧ್ಯಾಪಕರು
ಬಸ್ರೂರು
ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ

೫. ಶ್ರೀ ಬಿ.ಕೆ. ಬಳಿಗಾರ್ (೭೪ ವರ್ಷ)
ಸಂಚಾಲಕರು, ಬಳಕೆದಾರರ ವೇದಿಕೆ
ಬಸ್ರೂರು
ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ

೬. ಶ್ರೀ ಬಿ. ಲಕ್ಷ್ಮೀ ನಾರಾಯಣ ಉಪಾಧ್ಯಾಯ (೪೫ ವರ್ಷ)

ಕೋಟೇಶ್ವರ

ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ

೭. ಶ್ರೀಮತಿ ಲಲಿತ (೮೦ ವರ್ಷ) (ಹಿರಿಯ ದೇವದಾಸಿ)

ದುಗ್ಗಪ್ಪನ ಮನೆ

ಬಸ್ರೂರು

ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ

೮. ಶ್ರೀಮತಿ ರಾಜೀವಿ (೮೫ ವರ್ಷ) (ಹಿರಿಯ ದೇವದಾಸಿ)

ದುಗ್ಗಪ್ಪನ ಮನೆ

ಬಸ್ರೂರು

ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ

೯. ಶ್ರೀ ಸುಧಾಕರ ನಾಯಕ್ (೫೫ ವರ್ಷ) ಉದ್ಯಮಿ

ಉತ್ತಿನೆಣೆ

ಬಳ್ಳೂರು

ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ

೧೦. ಶ್ರೀ ಹಿರಿಯಡ್ಕ ಗೋಪಾಲರಾವ್ (೮೨ ವರ್ಷ)

ಮದ್ದಳೆ ಕಲಾವಿದರು

ಪೆರ್ಣಂಕಿಲ

ಹಿರಿಯಡ್ಕ

ಉಡುಪಿ ತಾಲೂಕು ಮತ್ತು ಜಿಲ್ಲೆ

೧೧. ಶ್ರೀ ಶ್ರೀನಿವಾಸ ಆಚಾರ್ಯ (೭೫ ವರ್ಷ)

ನಿವೃತ್ತ ಅಧ್ಯಾಪಕರು

ಹೆಬ್ರಿ

ಕಾರ್ಕಳ ತಾಲೂಕು, ಉಡುಪಿ ಜಿಲ್ಲೆ



# ಗ್ರಂಥಋಣ

೧. ಅನಂತರಾಮ ಕೆ, ೧೯೭೭, *ದಕ್ಷಿಣದ ಸಿರಿನಾಡು*, ಅನಂತ ಪ್ರಕಾಶನ, ಮೈಸೂರು.

೨. ಪ್ರೊ. ಕನರಾಡಿ ವಾದಿರಾಜ ಭಟ್ಟ, ೧೯೮೭, *ದೇವದಾಸಿಯರ ಹಾಡುಗಳು*, ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಬಸ್ರೂರು.

೩. ಪ್ರೊ. ಕನರಾಡಿ ವಾದಿರಾಜ ಭಟ್ಟ, ೧೯೯೭, *ಹೆಸರಾದ ಪಟ್ಟಣ ಬಸ್ರೂರು : ಒಂದು ಅಧ್ಯಯನ*, ಶ್ರೀ ಶಾರದಾ ಕಾಲೇಜ್ ಟ್ರಸ್ಟ್, ಬಸ್ರೂರು.

೪. ಡಾ. ಕಲಬುರ್ಗಿ ಎಂ.ಎಂ, ೧೯೮೭, *ಜಾನಪದ ಸಾಹಿತ್ಯ ದರ್ಶನ, ಭಾಗ - ೨*, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫. ಡಾ. ಕಲಬುರ್ಗಿ ಎಂ.ಎಂ, ೧೯೯೪, *ಕರ್ನಾಟಕ ಕೈಫಿಯತ್ತುಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಡಾ. ಕಲಬುರ್ಗಿ ಎಂ.ಎಂ, ರಾಮಭಟ್ಟ ಬಿ.ಎಸ್, ೧೯೯೪, *ಕೆಳದಿ ಸಂಸ್ಥಾನದ ಸಮಗ್ರ ಅಧ್ಯಯನ*, ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರಂ.

೭. ಕಡತೋಟದ ಎನ್.ಕೆ, ೧೯೮೩, ಎಲ್ಲಮ್ಮನ *ಜೋಗತಿಯರು ಹಾಗೂ ದೇವದಾಸಿ ಪದ್ಧತಿ*, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೮. ಡಾ. ಕೆಮ್ತೂರು ರಘುಪತಿ ಭಟ್ಟ, ೧೯೭೯, *ತುಳುನಾಡಿನ ಸ್ಥಳನಾಮಗಳು*, ಬೆಂಗಳೂರು.

೯. ಕೃಷ್ಣರಾವ್ ಎಂ.ವಿ, ಕೇಶವ ಭಟ್ಟ ಎಂ, ೧೯೭೦, *ಕರ್ನಾಟಕದ ಇತಿಹಾಸ ದರ್ಶನ*, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ ನಿಯಮಿತ, ಬೆಂಗಳೂರು.

೧೦. ಖಂಡೋಬ ಪಿ.ಕೆ, ೧೯೯೩, *ಜಾನಪದ ಮುನ್ನೋಟ*, ಸಂಗೀತಾ ಪಬ್ಲಿಕೇಷನ್ಸ್, ಗುಲಬರ್ಗಾ.

೧೧. ಗಂಗೂಲಿ, ಅನು : ಡಿ.ಸಿ. ರುಕ್ಕಮ್ಮ, ೧೯೭೧, *ಯುಗಯಾತ್ರಿ ಭಾರತೀಯ ಸಂಸ್ಕೃತಿ*, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೨. ಗುಂಡಾ ಜೋಯಿಸ್ ಕೆಳದಿ, ೧೯೭೬, *ಲಿಂಗಣ್ಣ ಕವಿಯ ಕೆಳದಿ ನೃಪ ವಿಜಯ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೩. ಡಾ. ಚಂದ್ರಶೇಖರ ಕಂಬಾರ (ಸಂ), ೧೯೮೫, *ಕನ್ನಡ ಜಾನಪದ ವಿಶ್ವಕೋಶ, ಸಂ - ೨*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೪. ಡಾ. ಚಿದಾನಂದಮೂರ್ತಿ ಎಂ, ೧೯೬೬, *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೫. ಡಾ. ಜೋಶಿ ಜಿ.ಜಿ, ೧೯೯೧, *ಕೌಟಿಲ್ಯನ ರಾಜ್ಯ ಪದ್ಧತಿಯ ಸಮೀಕ್ಷೆ*, ಶರತ್ ಪ್ರಕಾಶನ ಮಂದಿರ, ಬೆಳಗಾವಿ.

೧೬. ದೀಕ್ಷಿತ್ ಜಿ.ಎಸ್, ರಾಮಸ್ವಾಮಿ, ಭಾರ್ಗವಿ ಶಿವಯ್ಯ, ೧೯೯೭, *ಶ್ರೀಕೃಷ್ಣದೇವರಾಯನ ಜೀವನ ಸಾಧನೆಗಳು*, ಪ್ರಾಚ್ಯ ವಸ್ತು ಮತ್ತು ಸಂಗ್ರಹಗಳ ನಿರ್ದೇಶನಾಲಯ, ಮೈಸೂರು.

೧೭. ಡಾ. ನರಸಿಂಹ ಮೂರ್ತಿ ಪಿ.ಎನ್, ೧೯೮೯, *ಕುಂದೇಶ್ವರ : ಒಂದು ಅಧ್ಯಯನ*, ಶ್ರೀ ಕುಂದೇಶ್ವರ ಯುವ ಜನ ಸಭಾ, ಕುಂದಾಪುರ.

೧೮. ಡಾ. ನರಸಿಂಹ ಮೂರ್ತಿ ಪಿ.ಎನ್, ೧೯೮೪, *ಮಾರಿಹಬ್ಬದ ಸ್ಮರಣ ಸಂಚಿಕೆ*, ಬಸ್ರೂರು.

೧೯. ಡಾ. ನಾಗೇಗೌಡ ಎಚ್.ಎಲ್ (ಸಂ), ೧೯೬೧, *ಪ್ರವಾಸಿ ಕಂಡ ಇಂಡಿಯಾ, (ಸಂ - ೧ ಮತ್ತು ೨)*, ಪ್ರಸಾರಾಂಗ,

ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೦. ಡಾ. ನಾಗೇಗೌಡ ಎಚ್.ಎಲ್ (ಸಂ) , ೧೯೮೩, *ಪ್ರವಾಸಿ ಕಂಡ ಇಂಡಿಯಾ, (ಸಂ - ೩)*, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೧. ಡಾ. ಪುರುಷೋತ್ತಮ ಬಿಳಿಮಲೆ, ೧೯೯೩, *ಜಾನಪದ ಕ್ಷೇತ್ರಕಾರ್ಯ - ಆಧುನಿಕ ವಿಧಾನಗಳು*, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ಡಾ. ಮರುಳಸಿದ್ಧಯ್ಯ ಎಚ್.ಎಂ, ೧೯೯೪, *ಭಾರತ ಸಮಾಜಕಾರ್ಯ ವಿಶ್ವಕೋಶ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೩. ಡಾ. ಮಯ್ಯ ಪಾ.ನ, ೧೯೯೫, *ಕೋಟದವರು*, ಪಾರಂಪಳ್ಳಿ ಪ್ರಕಾಶನ, ಮಂಗಳೂರು.

೨೪. ಪ್ರೊ. ರಮೇಶ್ ಜಿ.ಕೆ (ಸಂ) , ೨೦೦೦, *ಸ್ಮೃತಿ ಸಂಸ್ಕೃತಿ*, ಸಹ್ಯಾದ್ರಿ ಪ್ರಕಾಶನ, ತೀರ್ಥಹಳ್ಳಿ.

೨೫. ರೋಹಿಣಿ ಬಿ.ಎಂ, ೨೦೦೦, *ಸ್ತ್ರೀ ಸಂಸ್ಕೃತಿ ಶಿಕ್ಷಣ*, ಹೇಮಾಂಶು ಪ್ರಕಾಶನ, ಮಂಗಳೂರು.

೨೬. ಪ್ರೊ. ಲಕ್ಷ್ಮಣ ತೆಲಗಾವಿ, ೧೯೯೧, *ಸಂಶೋಧನ*, ಡಾ. ಎಂ.ಚಿದಾನಂದಮೂರ್ತಿ ಅಭಿನಂದನ ಸಮಿತಿ, ಬೆಂಗಳೂರು.

೨೭. ಡಾ. ವೀರೇಶ. ಶೇ. ಬಡಿಗೇರ, ೧೯೯೯, *ಉತ್ತರ ಕರ್ನಾಟಕದ ಜನಪದ ಗೀತ ಮೇಳಗಳು*, ವಿಮೋಚನ ಪ್ರಕಾಶನ, ಅಥಣಿ.

೨೮. ಡಾ. ವಸಂತ ಸೆಟ್ಟಿ ಬಿ, ೧೯೯೧, *ದಕ್ಷಿಣ ಕನ್ನಡದ ಪ್ರಾಗಿತಿಹಾಸ* (ಡಾ. ಚಿದಾನಂದ ಮೂರ್ತಿ ಗೌರವ ಸಂಪುಟ) ಬೆಂಗಳೂರು.

೨೯. ವೆಂಕಟೇಶ ಜೋಯಿಸ್ ಕೆ.ಜಿ, ೧೯೯೬, *ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೦. ಡಾ. ವೆಂಕಟರತ್ನಂ ಎ.ವಿ, ೧೯೭೪, *ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ*, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩೧. ವೆಂಕಟಸುಬ್ಬಯ್ಯ ಜಿ. (ಸಂ), *ಕನ್ನಡ ನಿಘಂಟು*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೨. ಡಾ. ಶಂಕರ್ ಜೋಗನ್, ೧೯೯೩, *ದೇವದಾಸಿ ಸಂಪ್ರದಾಯ*, ವಿಮೋಚನ ಪ್ರಕಾಶನ, ಅಥಣಿ.

೩೩. ಶಾರದ ಶಾಮಣ್ಣ, ೧೯೯೩, *ಜಾನಪದ ನೆಲೆಯಲ್ಲಿ ಮಹಿಳೆ*, ಕಳಶ ಪ್ರಕಾಶನ, ಶಂಕರಪುರ, ಬೆಂಗಳೂರು.

೩೪. ಶೈಲಜಾ ಹಿರೇಮಠ, ೧೯೯೯, *ಪಾತರದವರು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೫. ಡಾ. ಶ್ರೀಕಂಠಯ್ಯ ಕೆ, ೧೯೮೩, *ವಿಜಯನಗರ ಕಾಲದ ಕನ್ನಡ ಸಾಹಿತ್ಯ ಜನಜೀವನ ಚಿತ್ರ*, ಗೀತಾ ಬುಕ್ ಹೌಸ್, ಮೈಸೂರು.

೩೬. ಶ್ರೀಕಂಠಶಾಸ್ತ್ರಿ ಎಸ್, ೧೯೫೪, *ಭಾರತೀಯ ಸಂಸ್ಕೃತಿ*, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩೭. ಸಾತವಲ್ಲಿ ವೆಂಕಟೇಶ ವಿಶ್ವನಾಥ, ೧೯೮೩, *ಸಮಕಾಲೀನ ಇತಿಹಾಸ*, ಬಯಲು ಸೀಮೆ ಪ್ರಕಾಶನ, ಬೆಂಗಳೂರು.

೩೮. ಡಾ. ಸಿದ್ಧಲಿಂಗಯ್ಯ, ೧೯೯೭, *ಗ್ರಾಮದೇವತೆಗಳು*, ಮೂಲಭಾರತಿ ಪ್ರಕಾಶನ, ಬೆಂಗಳೂರು.

೩೯. ಸುಮುಖಾನಂದ ಜಲವಳ್ಳಿ, ೧೯೯೯, ಮಾನವೀಯ ಮೌಲ್ಯ ಮತ್ತು ಧರ್ಮ, ಕಾವ್ಯಶ್ರೀ ಪ್ರಕಾಶನ, ಕಿನ್ನಿಗೋಳಿ.

೩೯. ಡಾ. ಸುಬ್ಬಣ್ಣ ರೈ ಎ, ೧೯೯೪, *ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು*, ಮಾಣಿ ಜೂನಿಯರ್ ಛೇಂಬರ್, ಮಾಣಿ.

೪೦. ಸ್ವಾಮಿ ಬಿ.ಎಸ್, ೧೯೯೮, *ತುಳುನಾಡ ಐಸಿರಿ*, ನವೀನ ಪ್ರಕಾಶನ, ಬೆಂಗಳೂರು.

೪೧. ಡಾ. ಹರಿಲಾಲ್ ಕೆ. ಪವಾರ್, ೧೯೯೫, *ಕರ್ನಾಟಕದ ಹೆಳವರು : ಒಂದು ಅಧ್ಯಯನ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೪೨. ಕನ್ನಡ ವಿಶ್ವಕೋಶ ಸಂಪುಟ - ೯

## ಆಂಗ್ಲ ಗ್ರಂಥಗಳು

1. Kali Prasad Goswami, 2000, *Devadasi Dancing Damsel*, A.P.H. Publishing Corportations, Delhi.
2. Robert Sewell, 1970, *A Forgotten Empire*, National Book Trust, India.
3. Konduri Sarojini Devi, 1990, *Religion in Vijayanagara Empire*, Sterling Publishers Pvt. Ltd., New Delhi.
4. Mohammed Hussain Nainar, 1942, *Geographers Knowledge of South India*, Madras.
5. Dr. Saraswathi Nanaiah N, 1992, *The Position of Woman during Vijayanagara Period (1336 - 1646)*, Saraswathi Publications, Mysore.

# ದಿನಪತ್ರಿಕೆಗಳು


೧. ರಾಜಶೇಖರ್ ಎಸ್, *ಬಲಪ್ರಯೋಗವೊಂದೆ ಪರಿಹಾರವಲ್ಲ : ಚಂದ್ರಗುತ್ತಿ ಬೆತ್ತಲೆ ಸೇವೆ*, ಪ್ರಜಾವಾಣಿ, ೨೯.೩.೧೯೮೭

೨. ವಿಜು ಪೂಣಚ್ಚ, *ಚಂದ್ರಗುತ್ತಿ ಜಾತ್ರೆ ೩ ವರ್ಷ ನಿಷೇಧ ಸಂಭವ*, ಮುಂಗಾರು, ೨೩.೩.೧೯೮೬

೩. *ದೇವದಾಸಿ ಅಂತ್ಯಕ್ಕೆ ಸರ್ಕಾರದ ಎಲ್ಲ ಕ್ರಮ*, ಪ್ರಜಾವಾಣಿ, ೫.೩.೧೯೭೦

೪. ರಂಜನಾ, *ದೇವದಾಸಿ ಪದ್ಧತಿ ಈಗಲೂ ಜೀವಂತ*, ಕನ್ನಡ ಪ್ರಭ, ೧.೨.೧೯೮೧

೫. ಚಂದ್ರಶೇಖರ ಪ್ರಾತಃಕಾಲ, *ದೇವದಾಸಿಯರು*, ಪ್ರಜಾವಾಣಿ, ೨೧.೧೨.೧೯೮೦

೬. ಯಶವಂತ್ ಡಿ, ಕೃಷ್ಣಪ್ಪ ಎಚ್, *ಮಾನವತೆ ಮರುಗಬೇಕಾದ ಹೇಯ ಪರಂಪರೆ ಚಂದ್ರಗುತ್ತಿಯ ಕುಖ್ಯಾತ ಬೆತ್ತಲೆ ಸೇವೆ*, ಮುಂಗಾರು, ೨೧.೩.೧೯೮೬

೭. ವಿಜು ಪೂಣಚ್ಚ, *ಬೆತ್ತಲೆ ಭಕ್ತರಿಂದ ಭೀಕರ ದೌರ್ಜನ್ಯ, ದೊಂಬಿ*, ಮುಂಗಾರು, ೨೧.೩.೧೯೮೬

೮. ಅರುಣ್, *ಚಂದ್ರಗುತ್ತಿಯಲ್ಲಿ ಭಕ್ತರ ಕೋಪ ಪೋಲಿಸರಿಗೆ ಬೆತ್ತಲೆ ಸೇವೆ*, ಕನ್ನಡ ಪ್ರಭ, ೨೧.೩.೧೯೮೬

೯. ರಾಮಕೃಷ್ಣ ಶಾಸ್ತ್ರಿ ಪ, *ಮಳೆಯನ್ನು ತರಿಸುವ ಬೆತ್ತಲೆ ಮಹಿಳೆಯರು*, ಕನ್ನಡ ಪ್ರಭ, ೨೨.೩.೧೯೮೩






ದೇವದಾಸಿಯರ ಮನೆದೈವದ ಭಂಡಾರ



ದೇವದಾಸಿಯರ ಕಲಾತ್ಮಕವಾದ ಮನೆ

